## ಪ್ರಾಧಿಕೃತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಜಿಲ್ಲಾ, ವಿಚಕ್ಷಣ ದಳ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ

**ಡಿ.ಟಿ.ಸಿ.ಆರ್. ಸಂಖ್ಯೆ: 13/2003-04, ದಿನಾಂಕ: 8ನೇ ಸೆಪ್ಟೆಂಬರ್ 2005**

**ಅಬಕಾರಿ ನಿರೀಕ್ಷಕರು, ಮೂಡಿಗೆರೆ ಉಪ ವಿಭಾಗ ಪ್ರ.ವ. ಸಂಖ್ಯೆ. 02/2003-04, ದಿನಾಂಕ: 10ನೇ ಜುಲೈ 2003**

**ಉಪಸ್ಥಿತರು:** ಶ್ರೀ ಬಿ.ಜಿ. ವಿಜಯೇಂದ್ರ,
ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಫಿರ್ಯಾದುದಾರರು**
ಅಬಕಾರಿ ನಿರೀಕ್ಷಕರು,
ಮೂಡಿಗೆರೆ ಉಪ ವಿಭಾಗ.

**ಆಪಾದಿತರು**
ಬಿ.ಆರ್. ಸುನೀಲ್ ಶೆಟ್ಟಿ ಬಿನ್ ರವೀಂದ್ರ ಶೆಟ್ಟಿ

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.7.2003 ರಂದು ಮಧ್ಯಾಹ್ನ 2.45 ರ ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಮೂಡಿಗೆರೆ ಉಪ ವಿಭಾಗ ಇವರು ಮತ್ತು ಸಿಬ್ಬಂದಿಯವರು ಬಂದ ಖಚಿತ ಮಾಹಿತಿ ಮೇರೆಗೆ ಪಂಚರ ಸಮಕ್ಷಮದೊಂದಿಗೆ ಕೊಪ್ಪ ತಾಲ್ಲೂಕಿನಿಂದ ತೀರ್ಥಹಳ್ಳಿಗೆ ಹೋಗುವ ಕ್ಲಾನಿಕ್ ಪ್ಲಾಂಟೇಷನ್ ಹತ್ತಿರದ ಗಣಪತಿ ದೇವಸ್ಥಾನದ ಹತ್ತಿರ ರಸ್ತೆಯ ಎಡಭಾಗದಲ್ಲಿ ವಾಹನ ಸಂಖ್ಯೆ: ಕೆ.ಎ. 20 ಎಂ. 1814 (ಅಂಬಾಸಿಡರ್ ಕಾರ್) ನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 208.080 ಲೀಟರ್ ತೆರಿಗೆ ರಹಿತ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಬಿ.ಆರ್. ಸುನೀಲ್ ಶೆಟ್ಟಿ ಬಿನ್ ರವೀಂದ್ರ ಶೆಟ್ಟಿ, 23 ವರ್ಷ, (ಕೊಂಕಣಿ) ಶೆಟ್ಟಿಜಾತಿ, ಎ.ಪಿ. ರಸ್ತೆ, ತೀರ್ಥಹಳ್ಳಿ ಟೌನ್, ಶಿವಮೊಗ್ಗ ಜಿಲ್ಲೆ, ಇವರು ಮದ್ಯ ಸಾಗಾಣಿಕೆಗೆ ಅಧಿಕೃತ ರಹದಾರಿ ಪತ್ರಗಳನ್ನಾಗಲಿ ಅಥವಾ ಇತರೆ ಯಾವುದೇ ದಾಖಲಾತಿಗಳನ್ನಾಗಲೀ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಇದು ಅಕ್ರಮ ಮದ್ಯವೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಪ್ರ. ವ. 02/2003-04, ದಿನಾಂಕ: 10.7.2003 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಕೆ. ಮಹೇಂದ್ರ ಬಿನ್ ಕರಿಯಣ್ಣ ಶೆಟ್ಟಿ, ಕಾಳಿದಾಸ ರಸ್ತೆ, ಅಪ್ಪರ್ ಪೇಟೆ, ಕೊಪ್ಪ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ, ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು ಇವರು ವಾಹನಕ್ಕೆ ರೂ.25,000/- (ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳ ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಾಹನದ ಮಾಲೀಕರಾದ ಶ್ರೀ ಕೆ. ಮಹೇಂದ್ರ ಬಿನ್ ಕರಿಯಣ್ಣ ಶೆಟ್ಟಿ, ಕಾಳಿದಾಸ ರಸ್ತೆ, ಅಪ್ಪರ್ ಪೇಟೆ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. ಇವರಿಗೆ ನೊಂದಾಯಿತ ಅಂಚೆ ಮೂಲಕ ಕಲಂ. 43 (ಬಿ) ಅಡಿಯಲ್ಲಿ ನೋಟೀಸ್ ಕಳುಹಿಸಿದ್ದು, ಅಂಚೆ ಕಛೇರಿಯಿಂದ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಬಂದಿರುವುದಿಲ್ಲದ ಕಾರಣ ಸದರಿ ವಾಹನದ ಮಾಲೀಕರಿಗೆ ಮತ್ತೊಮ್ಮೆ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು, ಕೊಪ್ಪ ವಲಯ ಇವರ ಮೂಲಕ ಖುದ್ದಾಗಿ ಜಾರಿಗೊಳಿಸಲು ನೀಡಿದ್ದು, ಸದರಿಯವರು ವಾಹನ ಮಾಲೀಕರಿಗೆ ನೋಟೀಸ್‌ನ್ನು ಖುದ್ದಾಗಿ ದಿನಾಂಕ:24.3.2005 ರಂದು ಜಾರಿಗೊಳಿಸಿ ಸ್ವೀಕೃತಿ ಪಡೆದು ದಿನಾಂಕ:1.4.2005 ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 208.080 ಲೀಟರ್ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 202.995 ಲೀಟರ್ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ವಿಲೇವಾರಿಗೆ ಕ್ರಮ ಕೈಗೊಳ್ಳಲಾಗಿರುತ್ತದೆ. ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಎರಡು ವರ್ಷ ಅವಧಿ ಪೂರ್ಣಗೊಂಡಿರುತ್ತದೆ. ಅಬಕಾರಿ ನಿರೀಕ್ಷಕರು, ಕೊಪ್ಪ ವಲಯ ಇವರು ಖುದ್ದಾಗಿ ವಾಹನದ ಮಾಲೀಕರಿಗೆ ನೋಟೀಸ್ ಜಾರಿಗೊಳಿಸಿದ್ದು, ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ.43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಶ್ರೀ ಬಿ.ಜಿ. ವಿಜಯೇಂದ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ.43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ. ಕೆ.ಎ. 20. ಎಂ. 1814 (ಅಂಬಾಸಿಡರ್ ಕಾರ್) ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 8ನೇ ಸೆಪ್ಟೆಂಬರ್ 2005 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಜಿಲ್ಲಾ ವಿಚಕ್ಷಣ ದಳ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 1363

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1 ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ:ಕಾಪಕಾ:ಎಫ್: 4/2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಕಾವೇರಿ ಕೋಂ ಲೇಟ್ M.R. ನಾರಾಯಣ 35 ವರ್ಷ ವಯಸ್ಸು
2. ಅರ್ಚನ, (3) ಅಮೃತ್ (4) ಅಶ್ರಿತಾ, (5) ಅಲೇಂದ್ರ ವಾಸ: ಮರೇಬೈಲು ಗೋಣಿಬೀಡು ಅಂಚೆ ಮೂಡಿಗೆರೆ.

1. ವಿಭಾಗೀಯ ನಿಯಂತ್ರಣಾಧಿಕಾರಿಗಳು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

**ಪ್ರಕಟಣೆ**

M.R. ನಾರಾಯಣ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 7.11.2003 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**

ಪಿ.ಆರ್. 1364 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ-1, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1 ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ:ಕಾಪಕಾ:ಎಫ್: 8/2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಶ್ರೀಮತಿ ಕಾತ್ಯಾಯಿನಿ ಕೋಂ ಶ್ರೀ ನಾರಾಯಣ 65 ವರ್ಷ ವಯಸ್ಸು, ಬನ್ನೂರು ಗ್ರಾಮ, ಹಂಗರವಳ್ಳಿ.

1. ಶ್ರೀ ನಾಗೇಶ್ ಬಿನ್ ಪುಟ್ಟಸ್ವಾಮಿ, ಬನ್ನೂರು ಗ್ರಾಮ ಹಂಗರವಳ್ಳಿ ಅಂಚೆ.
2. ಕಾರ್ಯದರ್ಶಿಗಳು ಮೆ|| ಟಿಂಬರ್ ಮರ್ಚೆಂಟ್ಸ್ ವೆಲ್‌ಫೇರ್ ಆರ್ಗನೈಸೇಷನ್ ಮತ್ತು ಟ್ರಸ್ಟ್ (ರಿ) ಆವತಿ ಕಾಂಪ್ಲೆಕ್ಸ್ ಚಿಕ್ಕಮಗಳೂರು
3. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಚಿಕ್ಕಮಗಳೂರು.

**ಪ್ರಕಟಣೆ**

ಮಧು ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 12.5.2005 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**

ಪಿ.ಆರ್. 1365 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ-1, ಚಿಕ್ಕಮಗಳೂರು.

**ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ**

**ಪ್ರಕಟಣೆ ಸಂ./ಜಿಪವಕ/ಲೆಕ್ಕ/ಕಾಪತ/ಸಿಆರ್-36/2005-06, ದಿನಾಂಕ: 5ನೇ ಸೆಪ್ಟೆಂಬರ್ 2005**

**ವಿಷಯ:** ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿಗೆ 2005-06ನೇ ಸಾಲಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1. ಸರ್ಕಾರದ ಆದೇಶ ಸಂಖ್ಯೆ/ಎಸ್ ಡಬ್ಲ್ಯೂ ಎಲ್-68/ಎಸ್ ಡಬ್ಲ್ಯು-89, ದಿನಾಂಕ: 2.11.1990.
2. ಸರ್ಕಾರದ ಆದೇಶ ಸಂಖ್ಯೆ/ಸ ಕ ಇ-42/ಪಕವಿ/95, ದಿನಾಂಕ: 29.7.1997.

2005-06ನೇ ಸಾಲಿಗೆ ಬೆಳಗಾವಿ ಜಿಲ್ಲೆಯ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಕುರಿತು ಅರ್ಹ ಅಭ್ಯರ್ಥಿಗಳಿಂದ ಈ ಕೆಳಕಂಡ ನಿಬಂಧನೆಗೆ ಒಳಗೊಂಡಂತೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು
2. ತರಬೇತಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು, ಮಹಿಳಾ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.
3. ಅಭ್ಯರ್ಥಿಯು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು ಈ ಕುರಿತು ಅಧಿಕೃತ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.

4. ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ (2) ಎರಡು ವರ್ಷದೊಳಗೆ ತೇರ್ಗಡೆಯಾದ ಕಾನೂನು ಪದವೀಧರರು ಈ ತರಬೇತಿಗೆ ಅರ್ಹರು.
5. ಆಯ್ಕೆಯಾದ ಅಭ್ಯರ್ಥಿಗಳಿಗೆ ನಾಲ್ಕು ವರ್ಷಗಳ ತರಬೇತಿ ನೀಡಲಾಗುವುದು. ಹಾಗೂ ಮಾಹೆಯಾನ ರೂ. 1000.00 ತರಬೇತಿ ಭತ್ಯೆ ನೀಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು ಕೇಂದ್ರ ಹಾಗೂ ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತಲ್ಲಿ ಈ ನಿಬಂಧನೆ ಅನ್ವಯವಾಗುವುದಿಲ್ಲ.
6. ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಕಡಿಮೆ ಇಲ್ಲದ ವಕೀಲ ವೃತ್ತಿಯಲ್ಲಿ ಅನುಭವವಿರುವ ಖಾಸಗಿ ಹಿರಿಯ ವಕೀಲರಲ್ಲಿ ತರಬೇತಿ ಪಡೆಯಲು ನಿಯೋಜಿಸಲಾಗುವುದು.
8. ಆಯ್ಕೆಯಾದ ಅಭ್ಯರ್ಥಿಯು ಸರ್ಕಾರದ ಎಲ್ಲ ನಿಬಂಧನೆಗೆ ಬದ್ಧನಾಗಿರುತ್ತೇನೆ ಎಂದು ಮುಚ್ಚಳಿಕೆಯನ್ನು ಬರೆದುಕೊಡತಕ್ಕದ್ದು.
9. ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ಹಾಗೂ ಪ್ರಮಾಣ ಪತ್ರಗಳನ್ನು ಒದಗಿಸಿದಲ್ಲಿ ಶಿಕ್ಷೆಗೊಳಪಡುವುದಲ್ಲದೆ ಅವನು ಪಡೆದುಕೊಂಡ ತರಬೇತಿ ಭತ್ಯೆಯ ಪೂರ್ತಿ ಹಣವನ್ನು ವಾರ್ಷಿಕ ಶೇ. 10 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಒಂದು ವೇಳೆ ಬಾಕಿ ವಸೂಲಿ ಉಳಿದಲ್ಲಿ ಭೂ ಕಂದಾಯ ಬಾಕಿ ನಿಯಮಾವಳಿ ಅನ್ವಯ ವಸೂಲಿ ಮಾಡಲಾಗುವುದು.
10. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಹಾಗೂ ಹೆಚ್ಚಿನ ಮಾಹಿತಿಯನ್ನು ಕಚೇರಿ ನಡೆಯುವ ವೇಳೆಯಲ್ಲಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ ನೆಹರು ನಗರ ಇವರ ಕಛೇರಿಯಲ್ಲಿ ಪಡೆದುಕೊಳ್ಳಲು ಸೂಚಿಸಿದೆ.
11. ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ದಿನಾಂಕವನ್ನು ಮತ್ತು ಸ್ಥಳವನ್ನು ತಿಳಿಸಲಾಗುವುದು.
12. ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಪದವಿ ಪರೀಕ್ಷೆ ಹಾಗೂ ಪ್ರಥಮ, ದ್ವಿತೀಯ ಮತ್ತು ತೃತೀಯ ವರ್ಷದ ಕಾನೂನು ಪರೀಕ್ಷೆಗಳ ದೃಢೀಕೃತ ಅಂಕಪಟ್ಟಿ ಮತ್ತು ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಜನ್ಮ ದಿನಾಂಕ ಪ್ರಮಾಣ ಪತ್ರ ಅಥವಾ ಟಿ.ಸಿ. ಮತ್ತು ಬಾರ್ ಅಸೋಸಿಯೇಷನ್‌ದಲ್ಲಿ ಸದಸ್ಯತ್ವ ಪಡೆದ ಬಗ್ಗೆ ಪ್ರಮಾಣ ಪತ್ರ ಲಗತ್ತಿಸಬೇಕು.
13. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 1.10.2005.

ಪಿ.ಆರ್. 1371 ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿ, ಬೆಳಗಾವಿ.

## ನೊಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡವಳಿಗಳು

**ಉಪಸ್ಥಿತರು:** ಶ್ರೀ ಎಂ.ಎಂ. ಸೇಖಜಿ
ನೋಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ.

**ವಿಷಯ:** ಕೆಎ-24:809 (ಒಮ್ನಿ ಬಸ್) ವಾಹನದ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ವಾಹನ ಒಡೆಯ ಅರ್ಜಿ ದಿನಾಂಕ:2.9.05.
2. ಮೋಟಾರು ವಾಹನ ನಿರೀಕ್ಷಕರ ವರದಿ ದಿ:14.9.05.

**ಪ್ರಸ್ತಾವನೆ:**

ವಾಹನ ಸಂ:ಕೆಎ-24:809 (ಒ.ಬ) ಒಡೆತನತ್ವ ಹೊಂದಿರುವ ಶ್ರೀ ಮಹಾಂತೇಶ ಬಸಪ್ಪಾ ಕೋರಿ, ಸಾ:ಮುರಗೋಡ, ತಾ:ಸವದತ್ತಿ ರವರು ಸದರಿ ವಾಹನ ತೆರಿಗೆಯನ್ನು ದಿ:31.5.05ರ ತ್ರೈಮಾಸಿಕ ಅಂತ್ಯದವರೆವಿಗೆ ಪಾವತಿಸಿ ದಿ:26.5.05 ರಂದು ಎಸ್.ಆರ್.ಸಂ:01:ಬಿಎಲ್‌ಹೆಚ್:05-6ರಲ್ಲಿ ವಾಹನದ ದಾಖಲೆಗಳನ್ನು ಅಧ್ಯರ್ಪಣಗೊಳಿಸುವುದರೊಂದಿಗೆ ಅನುಪಯುಕ್ತತೆ ಘೋಷಿಸಿದ್ದರು. ದಿ:2.9.05ರ ತಮ್ಮ ಅರ್ಜಿಯಲ್ಲಿ ಸದರಿ ವಾಹನವು ರಿಪೇರಿಯಾಗದ ಸ್ಥಿತಿಯಲ್ಲಿರುವುದರಿಂದ, ನೊಂದಣಿ ರದ್ದತಿಗಾಗಿ ಕೋರಿರುತ್ತಾರೆ. ವಾಹನ ಒಡೆಯರ ಪ್ರಸ್ತಾವನೆಗೆ ಪೂರಕವಾಗಿ ಮೋ. ವಾ.ನಿ.ರ ವರದಿ ಪಡೆಯಲಾಗಿ ವಾಹನದ ಸ್ಥಿತಿಗತಿ ವಿವರಿಸಿ ಸದರಿ ವಾಹನದ ದುರಸ್ತಿಯ ಖರ್ಚು ಮಿತವ್ಯಯವಾಗದೇ ದುಬಾರಿಯಾಗುವುದಾಗಿ ನೊಂದಣಿ ರದ್ದತಿಗಾಗಿ ಮಾಡಿರುವ ಶಿಫಾರಸ್ಸಿನ ವರದಿ ದಿ:14.9.05ರ ಮೇರೆಗೆ ಹೊರಡಿಸಿರುವ ಆದೇಶ.

### ಆದೇಶ ಸಂ:ಸಪ್ರಾಸಾಅ:ಬೈ:ನೊಂ.ರ:ಕೆಎ-24:809:05-06, ದಿನಾಂಕ:14ನೇ ಸೆಪ್ಟೆಂಬರ್ 2005

ಪ್ರಸ್ತಾಪಿತ ಕಾರಣಗಳನ್ನು ಪರಿಗಣಿಸುವುದರೊಂದಿಗೆ ಮೋಟಾರು ವಾಹನ ಕಾಯ್ದೆ 1988ರ ಕಲಂ 55 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ನೊಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾ.ಸಾ.ಅ. ಆದ ನಾನು ಎಂ.ಎಂ. ಸೇಖಜಿ ದಿನಾಂಕ:14.9.05 ರಿಂದ ಅನ್ವಯವಾಗುವಂತೆ ಕೆಳಕಂಡ ವಿವರಗಳನ್ನು ಹೊಂದಿರುವ ವಾಹನ ಸಂ:ಕೆಎ-24:809(ಒ.ಬ)ರ ನೊಂದಣಿ ಹಾಗೂ ನೊಂದಣಿ ಪ್ರಮಾಣಪತ್ರವನ್ನು ಮುಂಬರುವ ಯಾವುದೇ ಬಾಕಿ ತೆರಿಗೆ ಅಥವಾ ಶುಲ್ಕಗಳ ಆಕ್ಷೇಪಣಾ ಮೊತ್ತ ಭರಿಸುವಿಕೆಗೆ ವಾಹನದ ಒಡೆಯರೇ ಭರಿಸಲು ಬದ್ಧರಾಗಿರುವರೆಂಬ ಹಾಗೂ ಮುಂದಿನ ದಿನಗಳಲ್ಲಿ ವಾಹನದ ಓಡಾಟ ಕಂಡುಬಂದಲ್ಲಿ ನೊಂದಣಿ ಪ್ರಾಧಿಕಾರ ತೆರಿಗೆ ಕುರಿತು ಮುಕ್ತ ಕ್ರಮ ಜಾರಿಗೆ ತರುವ ಅವಕಾಶ ಹೊಂದಿದೆ ಎಂಬ ಷರತ್ತಿಗೊಳಪಡಿಸಿ ರದ್ದುಪಡಿಸಿದ್ದೇನೆ.

### ವಾಹನದ ವಿವರಗಳು

| | | | |
|---|---|---|---|
| 1 | ವಾಹನದ ಸಂಖ್ಯೆ | : | ಕೆಎ-24:809 |
| 2 | ವಾಹನದ ವರ್ಗ | : | ಒಮ್ನಿ ಬಸ್ಸ್ |
| 3 | ಅಡಿಗಟ್ಟು ಸಂಖ್ಯೆ | : | 616 ಎಫ್‌ಡಿ 72 5560 |
| 4 | ಯಂತ್ರ ಸಂಖ್ಯೆ | : | 616969 073905 |
| 5 | ಸಿಲಿಂಡರ್ ಸಂಖ್ಯೆ | : | ನಾಲ್ಕು |
| 6 | ಭಾರ ರಹಿತ ತೂಕ | : | 1500 ಕೆ.ಜಿ. |
| 7 | ಆಸನ ಸಾಮರ್ಥ್ಯ | : | 12+1 |
| 8 | ಒಡೆಯರ ಹೆಸರು | : | ಮಹಾಂತೇಶ ಬ.ಕೋರಿ, ಸಾ:ಮುರಗೋಡ ತಾ:ಸವದತ್ತಿ. |

ನೊಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ
ಪಿ.ಆರ್. 1372 ಬೈಲಹೊಂಗಲ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ಅಧಿಸೂಚನೆ ಸಿಆಸುಇ 464 ಸೆಅಸೆ 2005, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2005**

ಇದೇ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:13.9.2005ರ ಮಾರ್ಪಾಟಿನಲ್ಲಿ ಶ್ರೀ ಎಸ್.ಎಂ. ಆಚಾರ್ಯ, ಐ.ಎ.ಎಸ್., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಬೆಂಗಳೂರು ರವರಿಗೆ ದಿನಾಂಕ:14.9.2005 ರಿಂದ 11.10.2005ರ ವರೆವಿಗೆ (ಉದಿಸೇ) ಒಟ್ಟು 28 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1373

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1)

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಚೇರಿ ಬಳ್ಳಾರಿ

**ಪ್ರಕಟಣೆ ಸಂ.ಜಿಸಕಅ/ಎಸ್-6/ಸಿಆರ್- /05-06, ಬಳ್ಳಾರಿ ದಿನಾಂಕ: 14ನೇ ಸೆಪ್ಟೆಂಬರ್ 2005**

**ವಿಷಯ:** 2005-06ನೇ ಸಾಲಿನಲ್ಲಿ ಪ.ಜಾತಿ:ಪ.ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:**
1. ಸರ್ಕಾರದ ಆದೇಶ ಸಂ.ಎಸ್.ಡಬ್ಲ್ಯೂ.ಎಸ್-681/ಎಸ್.ಡಬ್ಲ್ಯು-89/ಬೆಂಗಳೂರು, ದಿನಾಂಕ: 2.11.90.
2. ಸರ್ಕಾರದ ಆದೇಶ ಸಂ.ಸಕಇ.421/ಪಕವಿ-95/ಬೆಂಗಳೂರು, ದಿನಾಂಕ: 29.07.97.
3. ಆಯುಕ್ತರು, ಸ.ಕ.ಇ. ಬೆಂಗಳೂರು ಇವರ ಪ.ಸಂ.ಸಕ.ಇ/ಸಮನ್ವಯ-6/ಸಿಆರ್-14/97-98, ದಿ:7.8.97 ಮತ್ತು 14.10.97.
4. ಸರ್ಕಾರದ ಆದೇಶ ಸಂ.ಸಕಇ.-535/ಸಕವಿ-2000, ಬೆಂಗಳೂರು, ದಿನಾಂಕ: 28.03.01.

ಬಳ್ಳಾರಿ ಜಿಲ್ಲೆಯಲ್ಲಿರುವ ಪ.ಜಾತಿ:ಪ.ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2005-06ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪ.ಜಾತಿ:ಪ.ವರ್ಗಕ್ಕೆ ಸೇರಿದವರಾಗಿರಬೇಕು.
2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಝೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.)
4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.
5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಝೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ, ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ಪ್ರತಿಗಳೊಂದಿಗೆ ಸಲ್ಲಿಸಬೇಕು.
6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವುದು.**

1) ಈ ತರಬೇತಿಗೆ ಪ.ಜಾತಿ:ಪ.ವರ್ಗದ 5 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.
2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.
3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ. 1,000/- (ರೂ. ಒಂದು ಸಾವಿರ ಮಾತ್ರ) 4 ವರ್ಷದವರೆಗೂ ಸ್ಟೈಫಂಡ್ ನೀಡಲಾಗುವುದು.
4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.
5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ/ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ)
6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇ.10 ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರೆದುಕೊಡತಕ್ಕದ್ದು.
7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ: 16.11.2005ರ ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ:** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಜಿ.ಎಂ. ಬಾಲರೆಡ್ಡಿ**

ಪಿ.ಆರ್. 1374

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

## DEPARTMENT OF PERSONNEL AND ADMINISTRATIVE REFORMS

**NOTIFICATION No. DPAR 236 SAS 2005, Bangalore, Dated: 14th September, 2005**

The services of Dr. K.P. Krishnan, IAS (KN 83), Additional Resident Commissioner, Karnataka Bhavan, New Delhi, are placed at the disposal of Government of India with immediate effect and until further orders, for appointment as Joint Secretary in the Department of Economic Affairs New Delhi, on Central Deputation basis.

This issues in pursuance of the communication No. 18.5.2005 EO(SM-I) dated 5.5.2005 of the Department of Personnel and Training and communication No.2011 08 2005-Ad.II Dated 13.9.2005 of the Government of India, Department of Economic Affairs, New Delhi.

By Order and in the name of the Governor of Karnataka

**K. SUDHAKARA SHETTY**

P.R. 1375

Under Secretary to Government,
Department of Personnel and Administrative Reforms. (Services-I).

## ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಇವರ ನಡವಳಿಗಳು

**ವಿಷಯ:** ಸ್ಥಗಿತಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಪೊಲೀಸ್ ಇಲಾಖೆ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಮಂಗಳೂರು , ಇದರ ಸಮಾಪನೆ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಇವರ ಪತ್ರ ಸಂ:ಜೆಆರ್ಎಂ/ಬಿ2/59/05-06, ದಿನಾಂಕ:22.7.05.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲಾ ಪೊಲೀಸ್ ಇಲಾಖೆ ನೌಕರರ ಗ್ರಾಹಕರ ಸಹಕಾರ ಸಂಘ, ನಿ, ಮಂಗಳೂರು, ಈ ಸಂಘವು ನೊಂದಣಿ ಸಂ:92387 ದಿ:30.1.1988 ರನ್ವಯ ನೋಂದಣಿಯಾಗಿದ್ದು, ಇದರ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿರುತ್ತದೆ. ಈ ಸಂಘವು ಹಲವಾರು ವರ್ಷಗಳಿಂದ ಯಾವುದೇ ಕೆಲಸವನ್ನು ನಿರ್ವಹಿಸದೆ ಸ್ಥಗಿತಗೊಂಡಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ರವರು ದಿ:9.6.05 ರಂದು (ದಿ:10.6.05ರ ಕನ್ನಡ ಪ್ರಭ ದಿನಪತ್ರಿಕೆ) ಪತ್ರಿಕಾ ಪ್ರಕಟಣೆ ನೀಡಿ, ಸಂಘವು ಸ್ಥಗಿತಗೊಂಡಿದ್ದು, ಪುನಃಶ್ಚೇತನಗೊಳಿಸಲು ಆಸಕ್ತಿ ಇರುವ ಸದಸ್ಯರು ಮುಂದೆ ಬರಬೇಕಾಗಿ ತಿಳಿಸಿ, ಹಾಗೂ 7 ದಿವಸಗಳೊಳಗೆ ಕ್ರಮವಿಡಬೇಕೆಂದು ಇಲ್ಲದಿದ್ದಲ್ಲಿ ಸಮಾಪನೆ ಮಾಡಲಾಗುವುದೆಂದು ಪ್ರಕಟಿಸಿದ್ದು, ಯಾವ ಇಚ್ಛಾ ಸದಸ್ಯರು ಸಂಘದ ಪುನಃಶ್ಚೇತನಕ್ಕೆ ಮುಂದೆ ಬಾರದಿದ್ದರಿಂದ, ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ ಯಾವುದೇ ರೀತಿಯ ಆಸಕ್ತಿ ಇಲ್ಲದೆ ಇರುವುದರಿಂದ ಮತ್ತು ಸಂಘದ ದಾಖಲಾತಿಗಳು ಯಾರ ವಶದಲ್ಲಿ ಇರುತ್ತದೆ ಎಂಬ ಬಗ್ಗೆ ಮಾಹಿತಿಯೂ ಲಭ್ಯವಾಗದೆ ಇರುವ ಕಾರಣ, ಸಂಘವು ಹಲವಾರು ವರ್ಷಗಳಿಂದ ಯಾವ ಕಾರ್ಯವನ್ನೂ ನಿರ್ವಹಿಸದೆ ಸ್ಥಗಿತಗೊಂಡಿರುವುದರಿಂದ ದಕ್ಷಿಣ ಕನ್ನಡ ಜಿಲ್ಲಾ ಪೊಲೀಸ್ ಇಲಾಖೆ ನೌಕರರ ಗ್ರಾಹಕರ ಸಹಕಾರ ಸಂಘ ನಿ, ಮಂಗಳೂರು, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ)ರ ರೀತ್ಯಾ ಸಮಾಪನೆಗೊಳಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು, ಇವರು ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲಿನ ಅಂಶಗಳನ್ನು ಪರಿಶೀಲಿಸಿ ಸದರಿ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂ:ಆರ್‌ಸಿಎಸ್/ಎಲ್‌ಕ್ಯೂಡಿ/75/05-06, ದಿನಾಂಕ: 17ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ಹೇಳಿದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವಿ. ಚನ್ನಪ್ಪ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಆದ, ನಾನು ಸರ್ಕಾರದ ಅಧಿಸೂಚನೆ ಕ್ರ.ಸಂ: ಸಿಎಂಡಬ್ಲ್ಯೂ/69/ಸಿಎಲ್ಎಂ/01 ದಿ:21.11.01 ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಅನ್ವಯ ನನಗೆ ದತ್ತವಾದ ಅಧಿಕಾರದನ್ವಯ ದಕ್ಷಿಣ ಕನ್ನಡ ಜಿಲ್ಲಾ ಪೊಲೀಸ್ ಇಲಾಖೆ ನೌಕರರ ಗ್ರಾಹಕರ ಸಹಕಾರ ಸಂಘ, ನಿ, ಮಂಗಳೂರು, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಸಹಕಾರ, ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಮಾರಾಟಾಧಿಕಾರಿ-11, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು, ಅಲ್ಲದೆ ಸಂಘದ ಅಡಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ, ಈ ಕೆಳಗೆ ಸಹಿ ಮಾಡಿದವರ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ಧತಿಯ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿ:17.9.2005 ರಂದು ನೀಡಲಾಗಿದೆ.

**ವಿ. ಚನ್ನಪ್ಪ**

ಪಿ.ಆರ್. 1376 ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ)

## ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಇವರ ನಡವಳಿಗಳು

**ವಿಷಯ:** ಸ್ಥಗಿತಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ ನಿ., ಮಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರ ಪತ್ರ ಸಂ.ಜೆಆರ್‌ಎಂ/ಬಿ2/ಡಿಎಲ್‌ಎಸ್/57/05-06, ದಿನಾಂಕ:22.7.05.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ, ನಿ, ಮಂಗಳೂರು, ಈ ಸಂಘವು ನೊಂದಣಿ ಸಂ:125/ ದಿ:4.8.1963 ರನ್ವಯ ನೋಂದಣಿಯಾಗಿದ್ದು, ಇದರ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿರುತ್ತದೆ. ಈ ಸಂಘವು ಹಲವಾರು ವರ್ಷಗಳಿಂದ ಯಾವುದೇ ಕೆಲಸವನ್ನು ನಿರ್ವಹಿಸದೆ ಸ್ಥಗಿತಗೊಂಡಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರುರವರು ದಿ:9.6.05 ರಂದು (ದಿ:10.6.05ರ ಕನ್ನಡ ಪ್ರಭ ದಿನಪತ್ರಿಕೆ) ಪತ್ರಿಕಾ ಪ್ರಕಟಣೆ ನೀಡಿ, ಸಂಘವು ಸ್ಥಗಿತಗೊಂಡಿದ್ದು, ಪುನಃಶ್ಚೇತನಗೊಳಿಸಲು ಆಸಕ್ತಿ ಇರುವ ಸದಸ್ಯರು ಮುಂದೆ ಬರಬೇಕಾಗಿ ತಿಳಿಸಿ, ಹಾಗೂ 7 ದಿವಸಗಳೊಳಗೆ ಕ್ರಮವಿಡಬೇಕೆಂದು ಇಲ್ಲದಿದ್ದಲ್ಲಿ ಸಮಾಪನೆ ಮಾಡಲಾಗುವುದೆಂದು ಪ್ರಕಟಿಸಿದ್ದು, ಯಾವ ಇಚ್ಛಾ ಸದಸ್ಯರೂ ಸಂಘದ ಪುನಃಶ್ಚೇತನಕ್ಕೆ ಮುಂದೆ ಬಾರದಿದ್ದರಿಂದ, ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ ಯಾವುದೇ ರೀತಿಯ ಆಸಕ್ತಿ ಇಲ್ಲದೆ ಇರುವುದರಿಂದ ಮತ್ತು ಸಂಘದ ದಾಖಲಾತಿಗಳು ಯಾರ ವಶದಲ್ಲಿ ಇರುತ್ತದೆ ಎಂಬ ಬಗ್ಗೆ ಮಾಹಿತಿಯೂ ಲಭ್ಯವಾಗದೆ ಇರುವ ಕಾರಣ, ಸಂಘವು ಹಲವಾರು ವರ್ಷಗಳಿಂದ ಯಾವ ಕಾರ್ಯವನ್ನೂ ನಿರ್ವಹಿಸದೆ ಸ್ಥಗಿತಗೊಂಡಿರುವುದರಿಂದ ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ ನಿ, ಮಂಗಳೂರು, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ)ರ ರೀತ್ಯಾ ಸಮಾಪನೆಗೊಳಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು, ಇವರು ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲಿನ ಅಂಶಗಳನ್ನು ಪರಿಶೀಲಿಸಿ ಸದರಿ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ ಸಂ:ಆರ್‌ಸಿಎಸ್/ಎಲ್‌ಕ್ಯೂಡಿ/77/05-06, ದಿನಾಂಕ: 17ನೇ ಸೆಪ್ಟೆಂಬರ್ 2005

ಪ್ರಸ್ತಾವನೆಯಲ್ಲಿ ಹೇಳಿದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವಿ. ಚನ್ನಪ್ಪ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಆದ, ನಾನು ಸರ್ಕಾರದ ಅಧಿಸೂಚನೆ ಕ್ರ.ಸಂ: ಸಿಎಂಡಬ್ಲ್ಯೂ/69/ಸಿಎಲ್‌ಎಂ/01 ದಿ:21.11.01 ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಅನ್ವಯ ನನಗೆ ದತ್ತವಾದ ಅಧಿಕಾರದನ್ವಯ ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ, ನಿ., ಮಂಗಳೂರು, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಸಹಕಾರ, ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು, ಅಲ್ಲದೆ ಸಂಘದ ಅಡಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ, ಈ ಕೆಳಗೆ ಸಹಿ ಮಾಡಿದವರ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ಧತಿಯ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿ:17.9.2005 ರಂದು ನೀಡಲಾಗಿದೆ.

**ವಿ. ಚನ್ನಪ್ಪ**

ಪಿ.ಆರ್. 1377 ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ)

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸ್ಥಗಿತಗೊಂಡಿರುವ ಸಣ್ಣ ನೀರಾವರಿ ಬಳಕೆದಾರರ ಸಹಕಾರ ಸಂಘ ನಿ, ಬಾಲೇನಹಳ್ಳಿ, ಹರಪನಹಳ್ಳಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪ್ರಸ್ತಾವನೆ ದಿನಾಂಕ 24.6.2005.
2. ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:6.7.2005.
3. ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ, ಇವರ ಪತ್ರ ದಿನಾಂಕ:15.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ

ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-07/2005-06, ದಿನಾಂಕ: 19ನೇ ಸೆಪ್ಟೆಂಬರ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸಣ್ಣ ನೀರಾವರಿ ಬಳಕೆದಾರರ ಸಹಕಾರ ಸಂಘ ನಿ, ಬಾಲೇನಹಳ್ಳಿ ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 19.9.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1378 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ವಿಷಯ:** ಸ್ಥಗಿತಗೊಂಡಿರುವ ಜಾಗೃತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಹರಿಹರ, ಹರಿಹರ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರ ಪ್ರಸ್ತಾವನೆ ದಿನಾಂಕ 5.7.2005 ಮತ್ತು 11.8.2005.

2. ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:27.7.2005.

**ಪ್ರಸ್ತಾವನೆ:**

ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-15/2004-05, ದಿನಾಂಕ: 19ನೇ ಸೆಪ್ಟೆಂಬರ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಜಾಗೃತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಹರಿಹರ, ಹರಿಹರ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ-ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 19.9.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1379 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2 ಬಿಜಾಪೂರ**

**ಪ್ರಕರಣ ಸಂಖ್ಯೆ:ಕಾಅಬ:ಕಾನಪ: 191/05 ದಿನಾಂಕ: 13ನೇ ಸೆಪ್ಟೆಂಬರ್ 2005**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ನಳಿನಿ ಧನಂಜಯ ಚೌಧರಿ, (2) ಅಭಿಷೇಕ್, (3) ಮೋನಿಕಾ, (4) ನಾಥು ಗೇರು ಚೌಧರಿ, (5) ಲಕ್ಷ್ಮಿಬಾಯಿ ನಾಥು ಚೌಧರಿ ತಾ।। ವಿಜಾಪುರ | | 1. ಶ್ಯಾಮರಾವ್ ದಿಗಂಬರ ಹೆಂದ್ರೆ ಸೌ।। ಕುಂಜರವಾಡಿ ತಾ।। ಹವೇಲಿ ಜಿಲ್ಲಾ।। ಪುಣೆ<br>2. ನ್ಯೂ ಇಂಡಿಯಾ ಮ್ಯಾನೇಜರ್ ಸಂಗಮೇಶ ನಗರ ಗುಲ್ಬರ್ಗಾ. |

**ಪ್ರಕಟಣೆ**

ಶ್ರೀಮತಿ ನಳಿನಿ ಧನಂಜಯ ಚೌಧರಿ ಇವರುಗಳಾದ ತಾವು ಮೃತ ಧನಂಜಯ ಇವರ ಹೆಂಡತಿ ಮತ್ತು ಮಕ್ಕಳು ತಂದೆ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಧನಂಜಯ ಇವರು ಒಂದನೇ ಪ್ರತಿವಾದಿಗಳಾದ ಶ್ಯಾಮ ರಾವ್ ದಿಗಂಬರ ಹೆಂದ್ರೆ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್. 1380 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಕೃತ ಜ್ಞಾಪನ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 103/04-05, ದಿನಾಂಕ: 27ನೇ ಆಗಸ್ಟ್ 2005**

**ವಿಷಯ:** ಮೆ: ಎನ್.ಯು. ಟ್ರಸ್ಟ್ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 52 ರಲ್ಲಿ 6-00 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಎನ್.ಯು. ಟ್ರಸ್ಟ್ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 52 ರಲ್ಲಿ 6-00 ಎ/ಗುಂ ಜಮೀನನ್ನು ಚಾರಿಟಬಲ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:ಸಿಆರ್:49/04-05, ದಿನಾಂಕ: 19.7.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 52 ರಲ್ಲಿ 6-00 ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ, ಬಸವನಗುಡಿ ಉಪ ನೋಂದಣಾ ಕಛೇರಿಯಲ್ಲಿ ದಿನಾಂಕ: 18.6.1999 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಚಾರಿಟಬಲ್ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 52 ರಲ್ಲಿ 6-00 ಎಕರೆ:ಗುಂಟೆ ಜಮೀನನ್ನು ಮೆ: ಎನ್.ಯು. ಟ್ರಸ್ಟ್ ಸಿ.ಎ.-6, 5ನೇ ಮುಖ್ಯರಸ್ತೆ, 11ನೇ ಕ್ರಾಸ್, ಪದ್ಮನಾಭನಗರ, ಬೆಂಗಳೂರು, ರವರಿಗೆ ಚಾರಿಟಬಲ್ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಚಾರಿಟಬಲ್ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1325 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 100/04-05, ದಿನಾಂಕ: 1ನೇ ಜುಲೈ 2005**

**ವಿಷಯ:** ಬೇಗಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬೇಗಿಹಳ್ಳಿ ಗ್ರಾಮದ ಸ.ನಂ. 6/3 ರಲ್ಲಿ 0-02 (ಎರಡು) ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಬೇಗಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ರವರು, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬೇಗಿಹಳ್ಳಿ ಗ್ರಾಮದ ಸ.ನಂ. 6/3 ರಲ್ಲಿ 0-02 (ಎರಡು) ಗುಂಟೆ ಜಮೀನನ್ನು ಹಾಲಿನ ಸಹಕಾರ ಸಂಘ ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:ಸಿಆರ್:50/04-05, ದಿನಾಂಕ: 27.4.2005

ರಲ್ಲಿ ಪ್ರಸ್ತಾಪಿತ ಬೇಗಿಹಳ್ಳಿ ಗ್ರಾಮದ ಸ.ನಂ. 6/3 ರಲ್ಲಿ 0-02 ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಹಕಾರ ಸಂಘಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 20.2.1996 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಚಾರಿಟಬಲ್ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬೇಗಿಹಳ್ಳಿ ಗ್ರಾಮದ ಸ.ನಂ. 6/3 ರಲ್ಲಿ 0-02 (ಎರಡು) ಗುಂಟೆ ಜಮೀನನ್ನು ಬೇಗಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಬೇಗಿಹಳ್ಳಿ ಜಿಗಣಿ ಹೋಬಳಿ, ಆನೇಕಲ್ ತಾಲ್ಲೂಕು ರವರಿಗೆ ಹಾಲಿನ ಸಹಕಾರ ಸಂಘ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಹಾಲಿನ ಸಹಕಾರ ಸಂಘ ಸ್ಥಾಪಿಸುವ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1326 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 16/2005-06, ದಿನಾಂಕ: 27ನೇ ಜುಲೈ 2005

**ವಿಷಯ:** ಕಸ್ತೂರಿ ಬಾ ಎಜ್ಯುಕೇಷನ್ ಟ್ರಸ್ಟ್ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಕೆಂಪಾಪುರ ಗ್ರಾಮದ ಸ.ನಂ. 29 ರಲ್ಲಿ 3-08 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಕಸ್ತೂರಿ ಬಾ ಎಜ್ಯುಕೇಷನ್ ಟ್ರಸ್ಟ್ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಕೆಂಪಾಪುರ ಗ್ರಾಮದ ಸ.ನಂ. 29 ರಲ್ಲಿ 3-08 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಎನ್.ಡಿ.:ಸಿಆರ್:30/05-06, ದಿನಾಂಕ: 7.7.2005 ರಲ್ಲಿ ಪ್ರಸ್ತಾಪಿತ ಯಲಹಂಕ ಹೋಬಳಿ, ಕೆಂಪಾಪುರ ಗ್ರಾಮದ ಸ.ನಂ. 29 ರಲ್ಲಿ 3-08 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ, ಗಾಂಧೀನಗರ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 23.7.1984 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ,

ಕೆಂಪಾಪುರ ಗ್ರಾಮದ ಸ.ನಂ. 29 ರಲ್ಲಿ 3-08 ಎ/ಗುಂ ಜಮೀನನ್ನು ಕಸ್ತೂರಿ ಬಾ ಎಜ್ಯುಕೇಷನ್ ಟ್ರಸ್ಟ್, ನಂ.35/2, ರಾಜಮಹಲ್ ವಿಲಾಸ್ ಎಕ್ಸ್‌ಟೆನ್ಷನ್, ಬೆಂಗಳೂರು-560 002. ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1327 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 19/2005-06, ದಿನಾಂಕ: 14ನೇ ಜುಲೈ 2005

**ವಿಷಯ:** ಮೆ: ಗ್ರೀನ್ ವುಡ್ ಹೈ ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸ.ನಂ. 8 ರಲ್ಲಿ 3-36, 9ರಲ್ಲಿ 4-18 ಹಾಗೂ 13 ರಲ್ಲಿ 1-00 ಒಟ್ಟು 9-14 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಗ್ರೀನ್ ವುಡ್ ಹೈ ರವರು, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸ.ನಂ. 8 ರಲ್ಲಿ 3-36, 9ರಲ್ಲಿ 4-18 ಹಾಗೂ 13 ರಲ್ಲಿ 1-00 ಒಟ್ಟು 9-14 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:(109)ಸಿಆರ್:15/05-06, ದಿನಾಂಕ: 28.6.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 8, 9 ಮತ್ತು 13 ರಲ್ಲಿ 9-14 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳು, ಬೆಂಗಳೂರು ದಕ್ಷಿಣ ತಾಲ್ಲೂಕು ಉಪ ನೊಂದಣಾ ಕಛೇರಿಯಲ್ಲಿ ದಿನಾಂಕ: 5.3.2004 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸ.ನಂ. 8 ರಲ್ಲಿ 3-36, 9ರಲ್ಲಿ 4-18 ಹಾಗೂ 13ರಲ್ಲಿ 1-00 ಒಟ್ಟು 9-14 ಎ/ಗುಂ ಜಮೀನನ್ನು ಮೆ: ಗ್ರೀನ್ ವುಡ್ ಹೈ. ನಂ. 377, 3ನೇ ಬಡಾವಣೆ, ಸರ್ಜಾಪುರ ರಸ್ತೆ, ಕೋರಮಂಗಲ, ಬೆಂಗಳೂರು-34. ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ

ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1328 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 26/2005-06, ದಿನಾಂಕ: 14ನೇ ಜುಲೈ 2005

**ವಿಷಯ:** ಶ್ರೀಮತಿ ಪಾರ್ವತಮ್ಮ ಮತ್ತು ವೀರಣ್ಣ ಚಾರಿಟಬಲ್ ಟ್ರಸ್ಟ್ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಕಾಚನಾಯ್ಕನಹಳ್ಳಿ ಗ್ರಾಮದ ಸ.ನಂ. 112/2 ರಲ್ಲಿ 1-19 ಮತ್ತು ಸರ್ವೆ.ನಂ. 112/1 ರಲ್ಲಿ 2-24 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶ್ರೀಮತಿ ಪಾರ್ವತಮ್ಮ ಮತ್ತು ವೀರಣ್ಣ ಚಾರಿಟಬಲ್ ಟ್ರಸ್ಟ್ ರವರು, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಕಾಚನಾಯ್ಕನಹಳ್ಳಿ ಗ್ರಾಮದ ಸ.ನಂ. 112/2 ರಲ್ಲಿ 1-19 ಮತ್ತು ಸರ್ವೆ.ನಂ. 112/1 ರಲ್ಲಿ 2-24 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:ಸಿಆರ್:3/05-06, ದಿನಾಂಕ: 19.5.2005 ಹಾಗೂ ಎಲ್.ಆರ್.ಎಫ್:ಸಿಆರ್-69/04-05 ದಿನಾಂಕ: 5.5.2005 ರಲ್ಲಿ ಪ್ರಸ್ತಾಪಿತ ಕಾಚನಾಯ್ಕನಹಳ್ಳಿ ಗ್ರಾಮದ ಸರ್ವೆ ನಂಬರ್. 112/2 ರಲ್ಲಿ 1-19 ಮತ್ತು ಸ.ನಂ. 112/1 ರಲ್ಲಿ 2-24 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ ಆನೇಕಲ್ ತಾಲ್ಲೂಕು ಈ ಕಛೇರಿಯಲ್ಲಿ ದಿನಾಂಕ: 5.7.98 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ, ಕಾಚನಾಯ್ಕನಹಳ್ಳಿ ಗ್ರಾಮದ ಸ.ನಂ. 112/2ರಲ್ಲಿ 1-19 ಮತ್ತು ಸರ್ವೆ.ನಂ. 112/1 ರಲ್ಲಿ 2-24 ಎ/ಗುಂ ಜಮೀನನ್ನು ಶ್ರೀಮತಿ ಪಾರ್ವತಮ್ಮ ಮತ್ತು ವೀರಣ್ಣ ಚಾರಿಟಬಲ್ ಟ್ರಸ್ಟ್, ದೊಮ್ಮಸಂದ್ರ, ಆನೇಕಲ್ ತಾಲ್ಲೂಕು ಬೆಂಗಳೂರು ಜಿಲ್ಲೆ-562 125 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1329 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 29/2005-06, ದಿನಾಂಕ: 9ನೇ ಆಗಸ್ಟ್ 2005

**ವಿಷಯ:** ಮೆ: ಲರ್ನಿಂಗ್ ಲೀಡರ್‌ಶಿಫ್ ಫೌಂಡೇಷನ್ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 52 ರಲ್ಲಿ 5-06 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಲರ್ನಿಂಗ್ ಲೀಡರ್‌ಶಿಫ್ ಫೌಂಡೇಷನ್ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 52 ರಲ್ಲಿ 5-06 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:(109)ಸಿಆರ್-01/05-06 ದಿನಾಂಕ: 9.8.2005ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್. 52 ರಲ್ಲಿ 5-06 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ, ದೆಹಲಿ, ಉಪ ನೊಂದಣಾ ಕಛೇರಿಯಲ್ಲಿ ದಿನಾಂಕ: 1.2.2003 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 52ರಲ್ಲಿ 5-06 ಎ/ಗುಂ ಜಮೀನನ್ನು ಮೆ: ಲರ್ನಿಂಗ್ ಲೀಡರ್‌ಶಿಫ್ ಫೌಂಡೇಷನ್ (ಎಲ್.ಎಲ್ಎಫ್) ನಂ. 1208, ಪದ್ಮ ಟವರ್, 1,5, ರಾಜೇಂದ್ರ ಪ್ಯಾಲೇಸ್, ನ್ಯೂಡೆಲ್ಲಿ-110008. ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1330 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕಂದಾಯ ಇಲಾಖೆ

### ಅಧಿಸೂಚನೆ ನಂ:ಕಂಇ 46 ಮುಅಬಿ 2004, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2005

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 23 ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 77 ಎಂಆಟಿ 2003 ದಿನಾಂಕ:30.4.2003ರಲ್ಲಿ ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಕ್ರಮಸಂಖ್ಯೆ:82,147,181, ಮತ್ತು 197 ರಲ್ಲಿ ಪ್ರಕಟಿಸಲಾದ

| ಕ್ರ. ಸಂ. | ಹಾಲಿ ಇರುವುದು | ತಿದ್ದಿ ಓದಿಕೊಳ್ಳುವುದು |
|---|---|---|
| 82 | ಶ್ರೀ ಬನಶಂಕರಿ ದೇವಸ್ಥಾನ ಹುಬ್ಬಳ್ಳಿ | ಶ್ರೀ ಬನಶಂಕರಿ ದೇವಸ್ಥಾನ ಹೆಬ್ಬಳ್ಳಿ |
| 147 | ಶ್ರೀ ದುರ್ಗಾದೇವಿ ದೇವಸ್ಥಾನ ಹುಬ್ಬಳ್ಳಿ | ಶ್ರೀ ದುರ್ಗಾದೇವಿ ದೇವಸ್ಥಾನ ದೇವರ ಹುಬ್ಬಳ್ಳಿ |
| 181 | ಶ್ರೀ ಪಾಂಡುರಂಗ ದೇವಸ್ಥಾನ ಹುಬ್ಬಳ್ಳಿ | ಶ್ರೀ ಪಾಂಡುರಂಗ ದೇವಸ್ಥಾನ ಹೆಬ್ಬಳ್ಳಿ |
| 197 | ಶ್ರೀ ಮಾರುತಿ ದೇವಸ್ಥಾನ ಹುಬ್ಬಳ್ಳಿ | ಶ್ರೀ ಮಾರುತಿ ದೇವಸ್ಥಾನ, ದೇವರ ಹುಬ್ಬಳ್ಳಿ |

ಹಾಲಿ ಇರುವುದನ್ನು ಮೇಲಿನಂತೆ ತಿದ್ದಿ ಓದಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1331

**ಕೆ. ಜಯಚಂದ್ರ**

ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ)

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ/ಎಂಡಿ:209/1992-93, ದಿನಾಂಕ: 22ನೇ ಆಗಸ್ಟ್ 2005**

**ವಾದಿ** — **ವಿರುದ್ಧ** — **ಪ್ರತಿವಾದಿಗಳು**

ಕಾರ್ಯದರ್ಶಿ,
ಶ್ರೀ ನೀಲಕಂಠೇಶ್ವರ ಸ್ವಾಮಿ ನೇಕಾರರ ಗೃಹ ನಿರ್ಮಾಣ ಸಹಕಾರ ಸಂಘ
ನಿ., ನಂ.72, 1ನೇ ಘಟ್ಟ, 1ನೇ ಹಂತ, ವೆಸ್ಟ್ ಆಫ್ ಕಾರ್ಡ್ ರಸ್ತೆ,
ವಿಜಯನಗರ, ಬೆಂಗಳೂರು-40.

ಶ್ರೀ ಎಲ್.ಎಸ್. ರಾಮಲಿಂಗಯ್ಯ,
ವ್ಯವಸ್ಥಾಪಕರು
ಶ್ರೀ ನೀಲಕಂಠೇಶ್ವರ ಎಸ್ಟೇಟ್ ಏಜೆನ್ಸಿ, ನಂ.12/6,
ಮಾಡೆಲ್ ಹೌಸ್ ಸ್ಟ್ರೀಟ್, ಬಸವನಗುಡಿ, ಬೆಂಗಳೂರು-4

### 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ಮೇರೆಗೆ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು

ವಾದಿಯು ಈ ನ್ಯಾಯಾಲಯದಲ್ಲಿ ದಾವೆ ಹೂಡಿ ಪ್ರತಿವಾದಿಯಿಂದ ಬರಬೇಕಾದ ರೂ.81,33,600.00 ಗಳನ್ನು ವಸೂಲಿ ಮಾಡಲು ಆದೇಶ ಹೊರಡಿಸಲು ಕೋರಿರುತ್ತಾರೆ. ಈ ದಾವೆಯಲ್ಲಿ ಸಲ್ಲಿಸಿದ ಮಧ್ಯಂತರ ಅರ್ಜಿಯನ್ನು ಪರಿಗಣಿಸಿದ ಈ ನ್ಯಾಯಾಲಯದ ತೀರ್ಪನ್ನು ಪ್ರತಿವಾದಿಯು ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣದಲ್ಲಿ ಪ್ರಶ್ನಿಸಿದ್ದು, ಮಾನ್ಯ ನ್ಯಾಯಾಧೀಕರಣವು ಸದರಿ ಅಹವಾಲನ್ನು ವಜಾಗೊಳಿಸಿದ ಕಾರಣ ಪ್ರತಿವಾದಿಯು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ನಂ.4688/2004ರ ರೀತ್ಯಾ ರಿಟ್ ಅರ್ಜಿ ಸಲ್ಲಿಸಿರುತ್ತಾರೆಂದು ಈ ರಿಟ್ ಅರ್ಜಿಯಲ್ಲಿ ವಾದಿಯು ಸಲ್ಲಿಸಿದ್ದ ಅರ್ಜಿಯನ್ನು ಪರಿಗಣಿಸಿ ಉಚ್ಚ ನ್ಯಾಯಾಲಯವು ದಿ:12.10.2004ರಂದು ಆದೇಶ ಹೊರಡಿಸಿ ಪ್ರತಿವಾದಿಯು ಗೊಟ್ಟಿಗೆರೆ ಗ್ರಾಮ, ಬೆಂಗಳೂರು ದಕ್ಷಿಣ ತಾಲ್ಲೂಕು, ಇಲ್ಲಿ ಹೊಂದಿರುವ ಸರ್ವೆ ನಂ.19/2ರಲ್ಲಿ 22 ಗುಂಟೆ, 19/3ಎ ರಲ್ಲಿ 35 ಗುಂಟೆ ಹಾಗೂ 18/2ರಲ್ಲಿ 1 ಎಕರೆ 25 ಗುಂಟೆ ಜಮೀನನ್ನು ಪರಭಾರೆ ಮಾಡದಂತೆ ನಿರ್ದೇಶನ ನೀಡಿರುತ್ತಾರೆ. ಪ್ರತಿವಾದಿಯು ದಿ:18.7.05 ರಂದು ಮೆಮೊ ಸಲ್ಲಿಸಿ ರಿಟ್ ಅರ್ಜಿಯನ್ನು ಹಿಂತೆಗೆದು ಕೊಂಡಿರುತ್ತಾರೆಂದು ಇದರಿಂದ ರಿಟ್ ಅರ್ಜಿ ವಜಾ ಆಗಿದೆಯೆಂದು ಸಲ್ಲಿಸಿ, ಪ್ರತಿವಾದಿಯ ಮೇಲ್ಕಂಡ ಸ್ಥಿರಾಸ್ತಿಯನ್ನು ಪರಭಾರೆ ಮಾಡುವ ಉದ್ದೇಶ ಹೊಂದಿರುವುದರಿಂದ ಈ ದಾವೆಯಲ್ಲಿ ಹೊರಡಿಸಬಹುದಾದ ತೀರ್ಪಿಗೆ ಒಳಪಟ್ಟು ಕಾಯ್ದೆ ಕಲಂ 103ರ ಮೇರೆಗೆ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಹಾಗೂ ಪ್ರತಿವಾದಿಯು ನ್ಯಾಯಾಲಯ ನೀಡಬಹುದಾದ ತೀರ್ಪನ್ನು ಜಾರಿಗೊಳಿಸಲು ಸಾಧ್ಯವಾಗದಂತೆ ಮಾಡಲು ಕ್ರಮವಿಟ್ಟಿದ್ದಾರೆಂದು ಸಲ್ಲಿಸಿರುತ್ತಾರೆ. ಈ ಅರ್ಜಿ ಪರಿಗಣಿಸದಿದ್ದಲ್ಲಿ ವಾದಿಗೆ ಭರಿಸಲಾಗದ ನಷ್ಟ ಉಂಟಾಗುತ್ತದೆಂದು ಹೇಳಿ ಅರ್ಜಿ ಪರಿಗಣಿಸಲು ಕೋರಿರುತ್ತಾರೆ. ವಾದಿಯ ಅರ್ಜಿಯನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

### ಆದೇಶ

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ದಾವೆಯಲ್ಲಿ ಈ ನ್ಯಾಯಾಲಯವು ಹೊರಡಿಸುವ ಆದೇಶಕ್ಕೆ ಒಳಪಟ್ಟು, ಪ್ರತಿವಾದಿಯು ಬೆಂಗಳೂರು ದಕ್ಷಿಣ ತಾಲ್ಲೂಕು, ಗೊಟ್ಟಿಗೆರೆ ಗ್ರಾಮದಲ್ಲಿ ಹೊಂದಿರುವ ಸ್ಥಿರಾಸ್ತಿಯ ಸರ್ವೆ ಸಂ.19/2ರಲ್ಲಿ 22 ಗುಂಟೆ, 19/3ಎ ರಲ್ಲಿ 35 ಗುಂಟೆ ಹಾಗೂ 18/2ರಲ್ಲಿ 1 ಎಕರೆ 25 ಗುಂಟೆ ಜಮೀನನ್ನು ಪರಭಾರೆ ಮಾಡದಂತೆ ನಿರ್ಬಂಧಿಸಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಿದೆ. ಪ್ರತಿವಾದಿಯು ಈ ಆದೇಶವನ್ನು ತೆರವುಗೊಳಿಸಲು / ಹಿಂತೆಗೆದುಕೊಳ್ಳಲು ಇಷ್ಟಪಟ್ಟಲ್ಲಿ ಈ ಆದೇಶ ಹೊರಡಿಸಿದ 1 ತಿಂಗಳೊಳಗಾಗಿ ರೂ.81,33,600.00 ಗಳನ್ನು ಬೆಂಗಳೂರು ಡಿ.ಸಿ.ಸಿ. ಬ್ಯಾಂಕಿನಲ್ಲಿ ಠೇವಣಿ ಮಾಡಿ ಠೇವಣಿ ರಸೀದಿಯನ್ನು ಈ ನ್ಯಾಯಾಲಯದ ಭದ್ರತೆಯಾಗಿ ನೀಡಲು ಆದೇಶಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ನಿರ್ದೇಶಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 22-08-2005 ರಂದು ನೀಡಿರುತ್ತೇನೆ.

**ಕೆ.ಹೆಚ್. ತಿಮ್ಮಯ್ಯ**

ಪಿ.ಆರ್. 1332

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18

**ಸಂ.ಜೆಆರ್‌ಬಿ:ಸಮಾಪನೆ:09/2005-06, ದಿನಾಂಕ: 1ನೇ ಸೆಪ್ಟೆಂಬರ್ 2005**

**ವಿಷಯ:** ಭದ್ರಾವತಿ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ವಿವಿಧೋದ್ದೇಶ ಸಹಕಾರ ಸಂಘ ನಿ., ಭದ್ರಾವತಿ ಇದರ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಪ್ರಸ್ತಾವೆ ಸಂ:ಡಿಆರ್‌ಎಸ್:ಸಮಾಪನೆ:48:2005-06 ದಿ:5.7.05

**ಪ್ರಸ್ತಾವನೆ:**

ಭದ್ರಾವತಿ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ವಿವಿಧೋದ್ದೇಶ ಸಹಕಾರ ಸಂಘ ನಿ., ಭದ್ರಾವತಿ ಈ ಸಹಕಾರ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟದ್ದಾಗಿರುತ್ತದೆ. ಈ ಸಂಘವು ದಿ:31.3.2005ರೊಳಗೆ ಆಡಳಿತ ಸಮಿತಿಯ ಚುನಾವಣೆಯನ್ನು ನಡೆಸಲು ವಿಫಲವಾದ

ಪ್ರಯುಕ್ತ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 28ಎ(5) ರನ್ವಯ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ರವರ ಆದೇಶದ ದಿ:1.4.2005 ರಂದು ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ. ಸದರಿಯವರು ದಿ:2.4.2005 ರಂದು ಪ್ರಭಾರ ವಹಿಸಿಕೊಂಡು, ಸಂಘದ ಆಡಳಿತಾಧಿಕಾರಿಗಳ ಸಭೆ ನಡೆಸಿದ್ದು, ಸಂಘದ ಕಾರ್ಯಚಟುವಟಿಕೆಗಳು 3 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸದಸ್ಯರಿಂದ ಸರಿಯಾಗಿ ಸಾಲ ವಸೂಲಾಗಿರುವುದಿಲ್ಲ. ಸಂಘದಲ್ಲಿರುವ ಮಾನವ ಚಾಲಿತ ಮುದ್ರಣಾಲಯವು ಕಾರ್ಯನಿರ್ವಹಿಸದಿರುವುದು. ಸಂಘವು ಸರಿಯಾಗಿ ವ್ಯವಹರಿಸದ ಕಾರಣ ಸಾಲದ ಬಾಕಿಗಾಗಿ ಭದ್ರಾವತಿ ತಾಲ್ಲೂಕು ಪಂಚಾಯ್ತಿರವರು ಸಂಘದ ಚರಾಸ್ತಿ ಮತ್ತು ಸ್ಥಿರಾಸ್ತಿಗಳನ್ನು ಜಪ್ತಿ ಮಾಡಿದ್ದು ಬಾಕಿ ತೀರಿಸುವ ಬಗ್ಗೆ ನಿಯಮಾನುಸಾರ ಕ್ರಮವಿಡುವುದಾಗಿ ದೃಢೀಕರಣ ನೀಡಿರುವುದರಿಂದ, ಮುಂದಿನ ಚರಾಸ್ಥಿಗಳ ಹರಾಜನ್ನು ಸದರಿಯವರು ತಡೆಹಿಡಿದಿರುತ್ತಾರೆ. ಈ ಕಾರಣಗಳಿಂದಾಗಿ ಸಂಘವನ್ನು ಕಾರ್ಯಾಚರಣೆಗೆ ತರುವುದು ಕಷ್ಟಕರವೆಂದು ತೀರ್ಮಾನಿಸಿ ಆಡಳಿತಾಧಿಕಾರಿಯವರು ಸಂಘದ ಸಮಾಪನೆಗೆ ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗರವರು ಸಮಾಪನೆಗೆ ಶಿಫಾರಸ್ಸು ಮಾಡಿ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿದ್ದು, ಸಂಘವನ್ನು ಕಾರ್ಯಾಚರಣೆಗೆ ತರುವುದು ಕಷ್ಟಕರವಾಗಿರುವುದನ್ನು ಗಮನಿಸಲಾಗಿದ್ದು, ಸಂಘದ ಪುನಃಶ್ಚೇತನ ಸಾಧ್ಯವಿಲ್ಲದಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69: ಸಿಎಲ್ಎಂ:2001, ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಭದ್ರಾವತಿ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ., ಭದ್ರಾವತಿ ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ, ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ಪಡೆದುಕೊಂಡು ಸಂಘದ ಆಸ್ತಿ-ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಈ ಆದೇಶದ ದಿನಾಂಕದಿಂದ 90 (ತೊಂಬತ್ತು) ದಿನಗಳೊಳಗಾಗಿ ಪ್ರಸ್ತಾವೆಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಚೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 1-9-2005 ರಂದು ಹೊರಡಿಸಲಾಗಿದೆ.

**ಕೆ.ಹೆಚ್. ತಿಮ್ಮಯ್ಯ**

ಪಿ.ಆರ್. 1333 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ,**
**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ ಇವರ ನ್ಯಾಯಾಲಯದಲ್ಲಿ**
**ನಂ. ಐ/9, ಡಾಲರ್ಸ್ ಕಾಲೋನಿ, ಗೋಕುಲ ರಸ್ತೆ ಹುಬ್ಬಳ್ಳಿ**
**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್/277/2005-06**

| **ಅರ್ಜಿದಾರರು:** | **ವಿರುದ್ಧ** | **ಎದುರು ಅರ್ಜಿದಾರರು:** |
|---|---|---|
| 1) ಜನರಲ್ ಮ್ಯಾನೇಜರ್ ದಿ. ಹಿರೇಕೆರೂರ ಅರ್ಬನ್ ಸಹಕಾರಿ ಬ್ಯಾಂಕ್ ನಿಯಮಿತ, ಹಿರೇಕೆರೂರ, ಜಿಲ್ಲಾ: ಹಾವೇರಿ. | | 1. ಶಿವಲಿಂಗಪ್ಪ ಮಲ್ಲೇಶಪ್ಪ ಕೋರಿ ವಿಜಯನಗರ, ಸಾ।। ಹಿರೇಕೆರೂರ ಜಿ: ಹಾವೇರಿ. |
| | | 2. ನವೀನ ಮಲ್ಲೇಶಪ್ಪ ಕೋರಿ, ವಿಜಯನಗರ, ಸಾ।। ಹಿರೇಕೆರೂರ, ಜಿ: ಹಾವೇರಿ. |
| | | 3. ರತ್ನಮ್ಮ ಮಲ್ಲೇಶಪ್ಪ ಕೋರಿ, ವಿಜಯನಗರ, ಸಾ।। ಹಿರೇಕೆರೂರ, ಜಿ: ಹಾವೇರಿ. |

**1959ರ ಕರ್ನಾಟಕ ಸಹಾಯಕ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ**

**ನೋಟೀಸು**

1. ವಾದಿಯುವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ದಿನಾಂಕ:30.4.2005ರ ವರೆಗೆ ಅಸಲು ಮತ್ತು ಬಡ್ಡಿಸೇರಿ ಒಟ್ಟು ರೂ. 1836402.00 (ರೂಪಾಯಿ ಹದಿನೆಂಟು ಲಕ್ಷದ ಮೂವತ್ತಾರು ಸಾವಿರದ ನಾಲ್ಕು ನೂರ ಎರಡು ಮಾತ್ರ) ಗಳನ್ನು ಹಾಗೂ ದಿನಾಂಕ: 1.5.2005 ರಿಂದ ಶೇ.19% ರಂತೆ ಬಡ್ಡಿಯೊಂದಿಗೆ ವಸೂಲು ಮಾಡಲು ವಾದಿಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.
2. ವಾದಿಯ ಈ ದಾವಾ ಅರ್ಜಿಯನ್ನು ದಾವೆ ಸಂಖ್ಯೆ: ಜೆ ಆರ್‌ಡಿ/ಯುಬಿಎಫ್/277/2005-06ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.
3. 1ನೇ ಪ್ರತಿವಾದಿಯು ತಾನು ಪಡೆದಿರುವ ಸಾಲಕ್ಕೆ ಪ್ರಾಮಿಸ್ಸರಿ ನೋಟ್ ಮತ್ತು ಸಾಲದ ಕರಾರು ಪತ್ರವನ್ನು ಬರೆದುಕೊಟ್ಟಿರುತ್ತಾರೆ ಹಾಗೂ 2 ಮತ್ತು 3ನೇ ಪ್ರತಿವಾದಿಗಳು 1ನೇ ಪ್ರತಿವಾದಿಗಳು ಪಡೆದಿರುವ ಸಾಲಕ್ಕೆ ಜಾಮೀನು ಪತ್ರ ಮತ್ತು ಕರಾರು ಪತ್ರ ಬರೆದುಕೊಟ್ಟಿರುತ್ತಾರೆ.
4. ಪ್ರತಿವಾದಿ 1 ಹಾಗೂ 2 ಮತ್ತು 3ನೇ ಪ್ರತಿವಾದಿಗಳು ಇವರು ತಮ್ಮ ಹೆಸರಿನಲ್ಲಿರುವ ಆಸ್ತಿಯನ್ನು ಮತ್ತು ಮಷಿನರಿಗಳನ್ನು ಮಾರಾಟ ಯಾ ವರ್ಗಾವಣೆ ಮಾಡುವ ಉದ್ದೇಶ ಹೊಂದಿರುವ ಕಾರಣ ಅವರ ಆಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಲು ಆದೇಶಿಸಬೇಕೆಂದು ವಾದಿಯವರು ಕೋರಿರುತ್ತಾರೆ.
5. ವಾದಿಯು ಈ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಅರ್ಜಿಯನ್ನು ಸಲ್ಲಿಸಿ 1ನೇ ಪ್ರತಿವಾದಿಯು 1ನೇ, 2ನೇ ಮತ್ತು 3ನೇ ಪ್ರತಿವಾದಿಗಳು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಸ್ಥಿರಾಸ್ತಿ ಮತ್ತು ದಾವಾ ಅರ್ಜಿಯಲ್ಲಿ ಕಾಣಿಸಿರುವ ಸ್ಥಿರಾಸ್ತಿ ಮತ್ತು ಮಷಿನರಿಗಳನ್ನು ಜಪ್ತಿ ಮಾಡಲು ತೀರ್ಪು ಪೂರ್ವ ಜಪ್ತಿ ಆದೇಶ (Attachment Before Judgement) ವನ್ನು ನೀಡುವಂತೆ ಕೋರಿರುತ್ತಾರೆ.

6. 1ನೇ ಪ್ರತಿವಾದಿಯು 1ನೇ, 2ನೇ ಮತ್ತು 3ನೇ ಪ್ರತಿವಾದಿಗಳು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಹಾಗೂ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಹಾಗೂ ಮಷಿನರಿಗಳನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ತೀರ್ಪು / ಡಿಕ್ರಿ ನೀಡಿದ್ದರೂ ಸದರಿ ತೀರ್ಪು / ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿ ಬ್ಯಾಂಕಿಗೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಹಾಗೂ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಿದಲ್ಲಿ ಪ್ರತಿವಾದಿಗಳಿಗೆ ಯಾವುದೇ ರೀತಿಯ ಆರ್ಥಿಕ ನಷ್ಟ ಮತ್ತು ತೊಂದರೆಯಾಗುವುದಿಲ್ಲವೆಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
7. ವಾದಿಯ ದಾವಾ ಅರ್ಜಿ ಮತ್ತು ಅಫಿಡೇವಿಟ್‌ನೊಂದಿಗೆ ದಾಖಲಿಸಿರುವ ಕಲಂ 103ರ ಅರ್ಜಿ ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು ಈ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೇ 1ನೇ, 2ನೇ ಮತ್ತು 3ನೇ ಪ್ರತಿವಾದಿಗಳು ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು / ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.
8. ಮೇಲೆ ವಿವರಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 220 ಸಿಎಲ್‌ಎಂ 2005 ದಿನಾಂಕ:22.8.2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಸಿ. ಕುರಬೇಟ, ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ ಆದ ನಾನು, 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿ ಮತ್ತು ಮಷಿನರಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 1836402.00 (ರೂಪಾಯಿ ಹದಿನೆಂಟು ಲಕ್ಷದ ಮೂವತ್ತಾರು ಸಾವಿರದ ನಾಲ್ಕು ನೂರ ಎರಡು ಮಾತ್ರ) ಗಳನ್ನು ವ್ಯಾಜ್ಯ ದಿನಾಂಕ:1.5.2005 ರಿಂದ ಸಾಲ ಪೂರ್ತಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 19% ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ:10.10.2005ರ ಒಳಗಾಗಿ ಜಮಾ ಮಾಡಿ, ಹೀಗೆ ಜಮಾ ಮಾಡಿದ ಅಧಿಕೃತ ಚಲನ್ / ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ 1ನೇ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಮತ್ತು ಮಷಿನರಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

ಪ್ರಕರಣವನ್ನು ದಿನಾಂಕ:10.10.2005 ರಂದು ಬೆಳಿಗ್ಗೆ 11.00 ಕ್ಕೆ ವಿಚಾರಣೆಗೆ ನಿಗದಿಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿ ಮತ್ತು ಮಷಿನರಿಗಳ ವಿವರ**

1. ತಾರಿಹಾಳ ಗ್ರಾಮ: ಧಾರವಾಡ ಜಿಲ್ಲೆಯಲ್ಲಿರುವ ಪ್ರತಿವಾದಿ 1 ಇವರ ಹೆಸರಿನಲ್ಲಿ ಮೆ|| ನಂದಿ ರಿ.ರೋಲಿಂಗ್ ಮಿಲ್ಸ್ ಪ್ರೈ ಲಿ., ಸರ್ವೇ ನಂ.89 ರಲ್ಲಿರುವ ಪ್ಲಾಟ ನಂ.2ಡಿ ಮತ್ತು 2ಇ, ಇಂಡಸ್ಟ್ರೀಯಲ್ ಏರಿಯಾ, ತಾರಿಹಾಳ, ಹುಬ್ಬಳ್ಳಿ ಶೆಡ್ಯೂಲ ಸ್ಥಿರಾಸ್ತಿ ಮತ್ತು ಮಷಿನರಿಗಳ ವಿವರ

| | | |
|---|---|---|
| East | : | Plot No. 2C |
| West | : | Plot No. 2F |
| North | : | Private Land |
| South | : | Public Road |

**PARTICULARS OF THE MACHINERIES IN M/S NANDI RE-ROLLING MILLS PVT. LTD., HUBLI**

1. Mill Shed
2. Main Motor 300 HP
3. Small Pulley
4. Big Pulley
5. V. Belts
6. Gear Couplings
7. Fly wheel with bearings and Plumber Blocks
8. Pinion 180 PCD
9. Mill stand 6 no.s, with rolls spindles and Coumplings
10. Water Pump + Pipeline
11. Reheating Furnace, Pusher and Blower
12. Plates Girder Channels
13. Electrical ACB Pannels Cables and other switches + LRS
14. Lathe
15. Shaper
16. Welding Machine
17. Compresser
18. Land 1 Acres
19. Scale pit + Civil Foundation + Drainage
20. Tools, Tackles, Rolls, Stores.

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 3.9.2005ರಂದು ನೀಡಿರುತ್ತೇನೆ.

**ಬಿ.ಸಿ. ಕುರಬೇಟ**

ಪಿ.ಆರ್. 1334

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ,
ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 38/2005-06, ದಿನಾಂಕ: 2ನೇ ಜುಲೈ 2005

**ವಿಷಯ:** ದಿ ಸೊಸೈಟಿ ಆಫ್ ದಿ ಹರಸೂಲನ್ ಸಿಸ್ಟರ್ಸ್ ಆಫ್ ಮೇರಿ ಇಮ್ಯಾಕ್ಯೂಲೇಟ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬಂಡೆಬೊಮ್ಮಸಂದ್ರ ಗ್ರಾಮದ ಸ.ನಂ. 1 ರಲ್ಲಿ 1-08 ಸ.ನಂ. 2/3 ರಲ್ಲಿ 0-02 ಹಾಗೂ ಕೆ.ಆರ್. ಪುರ ಹೋಬಳಿ ತಂಬುಚೆಟ್ಟಿ ಪಾಳ್ಯದ ಸ.ನಂ. 4/5 ರಲ್ಲಿ 1-28 ಎ/ಗುಂ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 51/9 ರಲ್ಲಿ 5-02 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ದಿ ಸೊಸೈಟಿ ಆಫ್ ದಿ ಹರಸೂಲನ್ ಸಿಸ್ಟರ್ಸ್ ಆಫ್ ಮೇರಿ ಇಮ್ಯಾಕ್ಯೂಲೇಟ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬಂಡೆಬೊಮ್ಮಸಂದ್ರ ಗ್ರಾಮದ ಸ.ನಂ. 1 ರಲ್ಲಿ 1-08 ಸ.ನಂ. 2/3 ರಲ್ಲಿ 0-02 ಹಾಗೂ ಕೆ.ಆರ್. ಪುರ ಹೋಬಳಿ ತಂಬುಚೆಟ್ಟಿ ಪಾಳ್ಯದ ಸ.ನಂ. 4/5 ರಲ್ಲಿ 1-28 ಎ/ಗುಂ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 51/9 ರಲ್ಲಿ 5-02 ಎ./ಗುಂ ಜಮೀನನ್ನು ಶೈಕ್ಷಣಿಕ ಹಾಗೂ ವೈದ್ಯಕೀಯ ಶಿಬಿರ ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:ಸಿಆರ್:121/05-06 ದಿನಾಂಕ: 28.6.2005 ಹಾಗೂ ತಹಸೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್(109)ಸಿಆರ್-12/05-06 ದಿನಾಂಕ: 20.6.2005 ರಲ್ಲಿ ಪ್ರಸ್ತಾಪಿತ ಬಂಡೆಬೊಮ್ಮಸಂದ್ರ ಗ್ರಾಮದ ಸ.ನಂ. 1 ರಲ್ಲಿ 1-08 ಸ.ನಂ. 2/3 ರಲ್ಲಿ 0-02 ಹಾಗೂ ಕೆ.ಆರ್. ಪುರ ಹೋಬಳಿ ತಂಬುಚೆಟ್ಟಿ ಪಾಳ್ಯದ ಸ.ನಂ. 4/5 ರಲ್ಲಿ 1-28 ಎ/ಗುಂ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 51/9 ರಲ್ಲಿ 5-02 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೊಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಜಿಲ್ಲೆ ಈ ಕಛೇರಿಯಲ್ಲಿ ದಿನಾಂಕ: 27.12.1988 ಮತ್ತು 16.10.2004 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬಂಡೆಬೊಮ್ಮಸಂದ್ರ ಗ್ರಾಮದ ಸ.ನಂ. 1ರಲ್ಲಿ 1-08 ಸ.ನಂ. 2/3 ರಲ್ಲಿ 0-02 ಹಾಗೂ ಕೆ.ಆರ್. ಪುರ ಹೋಬಳಿ ತಂಬುಚೆಟ್ಟಿ ಪಾಳ್ಯದ ಸ.ನಂ. 4/5 ರಲ್ಲಿ 1-28 ಎ/ಗುಂ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕುಂಬಳಗೋಡು ಗ್ರಾಮದ ಸ.ನಂ. 51/9 ರಲ್ಲಿ 5-02 ಎ/ಗುಂ ಜಮೀನನ್ನು ದಿ ಸೊಸೈಟಿ ಆಫ್ ದಿ ಹರಸೂಲನ್ ಸಿಸ್ಟರ್ಸ್ ಆಫ್ ಮೇರಿ ಇಮ್ಯಾಕ್ಯೂಲೇಟ್ ನಂ. 26, ಡೇವಿಸ್ ರೋಡ್, ಸೆಂಟ್ ಥಾಮಸ್ ಟೌನ್ ಪೋಸ್ಟ್, ಬೆಂಗಳೂರು-84 ರವರಿಗೆ ಶೈಕ್ಷಣಿಕ ಹಾಗೂ ವೈದ್ಯಕೀಯ ಶಿಬಿರ ನಡೆಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಹಾಗೂ ವೈದ್ಯಕೀಯ ಶಿಬಿರ ಸ್ಥಾಪಿಸುವ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1347

ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 151/2004-05, ದಿನಾಂಕ: 27ನೇ ಜುಲೈ 2005**

**ವಿಷಯ:** ಮೆ: ಪುನರ್ಜನಿ ವೈದ್ಯಶಾಲಾ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಚಿಕ್ಕನಾಯಕನಹಳ್ಳಿ ಗ್ರಾಮದ ಸ.ನಂ. 14/2 ರಲ್ಲಿ 0-23 ಗುಂಟೆ ಜಮೀನನ್ನು ಚಾರಿಟಬಲ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ವರ್ಗಾಯಿಸಲು ಅನುಮತಿ ಕೋರಿರುವ ಬಗ್ಗೆ.

ಮೆ: ಪುನರ್ಜನಿ ವೈದ್ಯಶಾಲಾ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಚಿಕ್ಕನಾಯಕನಹಳ್ಳಿ ಗ್ರಾಮದ ಸ.ನಂ. 14/2 ರಲ್ಲಿ 0-23 ಜಮೀನನ್ನು ಚಾರಿಟಬಲ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:ಸಿಆರ್-11/05-06 ದಿನಾಂಕ: 20.5.2005ರಲ್ಲಿ ಪ್ರಸ್ತಾಪಿತ ವರ್ತೂರು ಹೋಬಳಿ, ಚಿಕ್ಕನಾಯ್ಕನಹಳ್ಳಿ ಗ್ರಾಮದ ಸ.ನಂ. 14/2 ರಲ್ಲಿ 0-23 ಗುಂಟೆ ಜಮೀನನ್ನು ಟ್ರಸ್ಟ್‌ಗೆ ವರ್ಗಾಯಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಉಪ ನೊಂದಣಾಧಿಕಾರಿಗಳ ಕಛೇರಿ, ಬೆಂಗಳೂರು, ಈ ಕಛೇರಿ ಬೆಂಗಳೂರು ದಕ್ಷಿಣ ತಾಲ್ಲೂಕು ಈ ಕಛೇರಿಯಲ್ಲಿ ದಿನಾಂಕ: 24.11.2004 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಟ್ರಸ್ಟ್‌ಗೆ ವರ್ಗಾಯಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಚಾರಿಟಬಲ್ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಚಿಕ್ಕನಾಯ್ಕನಹಳ್ಳಿ ಗ್ರಾಮದ ಸ.ನಂ. 14/2 ರಲ್ಲಿ 0-23 ಗುಂಟೆ ಜಮೀನನ್ನು ಮೆ: ಪುನರ್ಜನಿ ವೈದ್ಯಶಾಲಾ ನಂ.417, ಕೈಕೊಂಡ್ರಹಳ್ಳಿ ಸರ್ಜಾಪುರ ರೋಡ್, ಬೆಂಗಳೂರು ರವರಿಗೆ ಚಾರಿಟಬಲ್ ಉದ್ದೇಶಕ್ಕಾಗಿ ವರ್ಗಾಯಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಚಾರಿಟಬಲ್ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ವರ್ಗಾಯಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1348 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 27/2005-06, ದಿನಾಂಕ: 16ನೇ ಜುಲೈ 2005**

**ವಿಷಯ:** ಮೆ: ಅಬ್ದುಲ್ ಅಮೀದ್ ಮೆಮೋರಿಯಲ್ ಎಜ್ಯುಕೇಷನ್ ಸೊಸೈಟಿ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಆವಲಹಳ್ಳಿ ಗ್ರಾಮದ ಸ.ನಂ. 108/5 ರಲ್ಲಿ 2-10 ಹಾಗೂ ಹೆಸರುಘಟ್ಟ ಹೋಬಳಿ ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 2-01 $^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ ಒಟ್ಟು 4-39$^1/_2$ ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಅಬ್ದುಲ್ ಅಮೀದ್ ಮೆಮೋರಿಯಲ್ ಎಜ್ಯುಕೇಷನ್ ಸೊಸೈಟಿ ರವರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಅವಲಹಳ್ಳಿ ಗ್ರಾಮದ ಸ.ನಂ. 108/5 ರಲ್ಲಿ 2-10 ಹಾಗೂ ಹೆಸರುಘಟ್ಟ ಹೋಬಳಿ ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 2-01$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ ಒಟ್ಟು 4-39$^1/_2$ ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ

ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:(ಬಿ.ಎನ್.ಎ.)ಸಿಆರ್:41/05-06 ದಿನಾಂಕ: 12.7.2005 ರಲ್ಲಿ ಪ್ರಸ್ತಾಪಿತ ಯಲಹಂಕ ಹೋಬಳಿ, ಅವಲಹಳ್ಳಿ ಗ್ರಾಮದ ಸ.ನಂ. 108/5 ರಲ್ಲಿ 2-10 ಹಾಗೂ ಹೆಸರುಘಟ್ಟ ಹೋಬಳಿ ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 2-01$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ ಒಟ್ಟು 4-39$^1/_2$ ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ ರಾಜಾಜಿನಗರ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 23.5.1985 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಲಿ, ಆವಲಹಳ್ಳಿ ಗ್ರಾಮದ ಸ.ನಂ. 108/5 ರಲ್ಲಿ 2-10 ಹಾಗೂ ಹೆಸರುಘಟ್ಟ ಹೋಬಳಿ ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 2-01$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ ಒಟ್ಟು 4-39$^1/_2$ ಎ/ಗುಂ ಜಮೀನನ್ನು ಮೆ: ಅಬ್ದುಲ್ ಅಮೀದ್ ಮೆಮೋರಿಯಲ್ ಎಜ್ಯುಕೇಷನ್ ಸೊಸೈಟಿ, ನಂ.29, ಅಲ್ಬರ್ಟ್ ಸ್ಟ್ರೀಟ್, ರಿಚ್ಮಂಡ್ ಟೌನ್, ಬೆಂಗಳೂರು-25 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1349 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 28/2005-06, ದಿನಾಂಕ: 16ನೇ ಜುಲೈ 2005

**ವಿಷಯ:** ಮೆ: ಕರ್ನಾಟಕ ಎಜ್ಯುಕೇಷನ್ ಸೊಸೈಟಿ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರುಘಟ್ಟ ಹೋಬಳಿ, ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 6-04$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಒಟ್ಟು 6-32$^1/_2$ ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಕರ್ನಾಟಕ ಎಜ್ಯುಕೇಷನ್ ಸೊಸೈಟಿ ರವರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರುಘಟ್ಟ ಹೋಬಳಿ, ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 6-04$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ ಒಟ್ಟು 6-32$^1/_2$ ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:(ಬಿ.ಎನ್.ಎ)ಸಿಆರ್-40/05-06 ದಿನಾಂಕ: 12.7.05ರಲ್ಲಿ ಪ್ರಸ್ತಾಪಿತ ಹೆಸರುಘಟ್ಟ ಹೋಬಳಿ, ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 6-04$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ ಒಟ್ಟು 6-32$^1/_2$ ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನಿಬಂಧಕರು, ಸಂಘಗಳ ನೊಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ 16.2.1976 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರುಘಟ್ಟ ಹೋಬಳಿ, ದಿಬ್ಬೂರು ಗ್ರಾಮದ ಸ.ನಂ. 21/1 ರಲ್ಲಿ 6-04$^1/_2$ ಮತ್ತು ಇಟ್ಟಗಲ್‌ಪುರ ಗ್ರಾಮದ ಸ.ನಂ. 80 ರಲ್ಲಿ 0-28 ಗುಂಟೆ, ಒಟ್ಟು 6-32$^1/_2$ ಎ/ಗುಂ ಜಮೀನನ್ನು ಮೆ: ಕರ್ನಾಟಕ ಎಜುಕೇಷನ್ ಸೊಸೈಟಿ, ನಂ.121, 3ನೇ ಅಡ್ಡರಸ್ತೆ, 3ನೇ ಹಂತ, ಜೆ.ಪಿ. ನಗರ, ಬೆಂಗಳೂರು-78. ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1350 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕಂದಾಯ ಇಲಾಖೆ

### ಅಧಿಸೂಚನೆ ಸಂಖ್ಯೆ:ಕಂಇ 128 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2005

ಶ್ರೀ ಸಿದ್ದಾರೂಢ ಸ್ವಾಮಿ ಸಿದ್ಧಾಶ್ರಮ ಟ್ರಸ್ಟ್, ರಾಣೆಬೆನ್ನೂರು ಇವರು ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು, ಖಂಡೇರಾಯನಹಳ್ಳಿ ಗ್ರಾಮದ ರಿ.ಸ.ನಂ. 10ಅ/1 ರಲ್ಲಿ 2 ಎಕರೆ 03 ಗುಂಟೆ ಕೃಷಿ ಜಮೀನನ್ನು ಆಶ್ರಮ ನಿರ್ಮಾಣ ಉದ್ದೇಶಕ್ಕಾಗಿ ಭೂಮಾಲಿಕರಿಂದ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಭೂಸು/ವಿಶಿ/67-03-04, ದಿನಾಂಕ: 3.10.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರಿನ ಒಟ್ಟು 2 ಎಕರೆ 03 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1ಎ) ಅಡಿ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ, ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು, ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಶ್ರೀ ಸಿದ್ದಾರೂಢ ಸ್ವಾಮಿ ಸಿದ್ಧಾಶ್ರಮ ಟ್ರಸ್ಟ್, ರಾಣೆಬೆನ್ನೂರು ಇವರು ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು, ಖಂಡೇರಾಯನಹಳ್ಳಿ ಗ್ರಾಮದ ರಿ.ಸ.ನಂ. 10ಅ/1 ರಲ್ಲಿ 2 ಎಕರೆ 03 ಗುಂಟೆ ಕೃಷಿ ಜಮೀನನ್ನು ಆಶ್ರಮ ನಿರ್ಮಾಣ

ಉದ್ದೇಶಕ್ಕಾಗಿ ಭೂಮಾಲಿಕರಿಂದ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ / ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 1351

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಂದಾಯ ಇಲಾಖೆ (ಭೂಸುಧಾರಣೆ)

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ನಡವಳಿಗಳು ಬೆಂಗಳೂರು

**ವಿಷಯ:** ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. 1ನೇ ನ್ಯಾಯಾಲಯ, ಗದಗ್, ಇವರ ಅಮಾನತ್ತು ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಅಭಿಯೋಜಕರು, ಗದಗ್ ಇವರ ಫ್ಯಾಕ್ಸ್ ಸಂದೇಶ ಪತ್ರ ದಿನಾಂಕ:17.12.2004.
2. ಅಧಿಕಾರಿಯವರ ಮನವಿ ದಿನಾಂಕ 2.4.2005.
3. ಈ ಕಛೇರಿಯ ಸಮಸಂಖ್ಯೆ:ಆದೇಶ ದಿ:18.12.04.

**ಪ್ರಸ್ತಾವನೆ:**

ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ್, ಇವರು ದಿನಾಂಕ:17.12.2004 ರಂದು ಈ ಕಛೇರಿಗೆ ಸಲ್ಲಿಸಿರುವ ಉಲ್ಲೇಖಿತ ಫ್ಯಾಕ್ಸ್ ಸಂದೇಶದಲ್ಲಿ, ದಿನಾಂಕ:15.12.2004 ರಂದು ಮಧ್ಯಾಹ್ನ 2-00 ಘಂಟೆ ಸುಮಾರಿಗೆ, ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಗದಗ್, ಇವರ ಮೇಲೆ ಶ್ರೀ ಅಬ್ದುಲ್ ಹಮೀದ್ ನಜೀರ್ ಅಹ್ಮದ್ ಶಾಲಗಾರ, ಇವರು ಗದಗ್ ಲೋಕಾಯುಕ್ತ ನಿರೀಕ್ಷಕರಿಗೆ ನೀಡಿದ ದೂರಿನ ಆಧಾರದ ಮೇಲೆ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಅಕ್ರಮ ಸಂಭಾವನೆ ಸ್ವೀಕರಿಸುವ ಕಾಲಕ್ಕೆ ಸದರಿ ಶ್ರೀ ಆರ್.ಎನ್. ಪಠಾಣ್, ಇವರು ಸಿಕ್ಕುಬಿದ್ದು, ಅವರ ಮೇಲೆ ಗದಗ ಲೋಕಾಯುಕ್ತ ಪೊಲೀಸರು ಗುನ್ನೆ ನಂ:2:04, ಕಲಂ:7,13(1)(ಡಿ) ಸಹ ಕಲಂ 13(2) ಪಿ.ಸಿ. ಕಾಯಿದೆ 1988 ರ ಮೇರೆಗೆ ಪ್ರಕರಣವನ್ನು ದಾಖಲು ಮಾಡಿಕೊಂಡಿರುವುದಾಗಿ ಹಾಗೂ ಸದರಿ ಅಧಿಕಾರಿಯನ್ನು ಬಂಧಿಸಿ, ಅಂದೇ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ ಎಂಬ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯನ್ವಯ, ಸದರಿಯವರನ್ನು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಮುಂದುವರೆಸುವುದು ಸಮಂಜಸವಾಗಿರುವುದಿಲ್ಲದ ಕಾರಣ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಅವರನ್ನು ಅಮಾನತ್ತಿನಲ್ಲಿ ಇಡಲಾಗಿತ್ತು.

ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು (ನಿಲಂಬನೆ) ಇವರು ಈ ಕಛೇರಿಗೆ ಉಲ್ಲೇಖ 2ರ ಮನವಿಯಲ್ಲಿ, ಸದರಿಯವರಿಗೆ 55 ವರ್ಷ ವಯಸ್ಸಾಗಿದ್ದು, ಮೂರು ವರ್ಷ ಸೇವೆ ಮಾತ್ರ ಬಾಕಿ ಇರುವುದರಿಂದ ಹಾಗೂ ಸದರಿಯವರಿಗೆ ಕೌಟುಂಬಿಕ ಆರೋಗ್ಯ ಹಾಗೂ ಆರ್ಥಿಕ ತೊಂದರೆಗಳಿರುವುದರಿಂದ, ಹಾಗೂ ಅವರ ವಿರುದ್ಧ ಇಲಾಖಾ ವಿಚಾರಣೆ ಇನ್ನೂ ಪ್ರಾರಂಭವಾಗಿಲ್ಲದಿರುವುದರಿಂದ ಅವರ ಅಮಾನತ್ತು ಆದೇಶವನ್ನು ರದ್ದುಗೊಳಿಸಲು ಕೋರಿರುತ್ತಾರೆ.

ಸದರಿ ಅಧಿಕಾರಿಯವರ ವಿರುದ್ಧ ಲೋಕಾಯುಕ್ತ ಪೊಲೀಸರು ಪ್ರಕರಣವನ್ನು ದಾಖಲುಗೊಳಿಸಿದ್ದು, ತನಿಖೆ ನಡೆಯುತ್ತಿರುತ್ತದೆ. ಸದರಿ ಪ್ರಕರಣವು ನ್ಯಾಯಾಲಯದಲ್ಲಿ ವಿಚಾರಣೆಯಾಗಿ ಮುಕ್ತಾಯಗೊಳ್ಳಲು ಹೆಚ್ಚಿನ ಸಮಯವಾಗುವ ಸಾಧ್ಯತೆ ಇರುವುದರಿಂದ, ಅಧಿಕಾರಿಯವರ ಮನವಿಯನ್ನು ಪರಿಗಣಿಸಿ, ಅವರ ಅಮಾನತ್ತಿನ ಆದೇಶವನ್ನು ಹಿಂತೆಗೆದುಕೊಂಡು, ಪುನರ್ ನೇಮಕ ಮಾಡಿ ಈ ಕೆಳಕಂಡ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ:ಡಿಪಿಎನ್:ಸಿಶಾ-1:155:2004-05, ಬೆಂಗಳೂರು, ದಿನಾಂಕ:14ನೇ ಸೆಪ್ಟೆಂಬರ್ 2005**

ಮನವಿಯ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು, ಗದಗ್ (ನಿಲಂಬನೆ) ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಅವರ ಅಮಾನತ್ತಿನ ಆದೇಶವನ್ನು 1957ರ ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮಗಳ 10ನೇ ನಿಯಮದ 5ನೇ ಉಪ ನಿಯಮದ ಕಂಡಿಕೆ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಹಾಗೂ ಸದರಿ ಅಧಿಕಾರಿಯವರನ್ನು ಹಾಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಜೆ.ಎಂ.ಎಫ್.ಸಿ. ನ್ಯಾಯಾಲಯ ನಿಪ್ಪಾಣಿ ಇಲ್ಲಿಗೆ ಮುಂದಿನ ಆದೇಶದವರೆಗೆ ಪುನರ್ ನೇಮಿಸಲಾಗಿದೆ.

**ಆರ್.ಜೆ. ದೇಸಾಯಿ**
ಪಿ.ಆರ್. 1352 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-249/05 ದಿನಾಂಕ: 16ನೇ ಸೆಪ್ಟೆಂಬರ್ 2005**

**ಅರ್ಜಿದಾರರು** ವಿರುದ್ಧ

1. ಶ್ರೀಮತಿ ಹನುಮಕ್ಕ ಕೋಂ ಲೇ॥ ತಿಮ್ಮಪ್ಪ
ಮನೆ ನಂ. 628, 1ನೇ ಕ್ರಾಸ್, ಬೂದಾಳ್ ರೋಡ್
ಎಸ್.ಜೆ.ಪಿ.ನಗರ, ದಾವಣಗೆರೆ.

**ಪ್ರತಿವಾದಿಗಳು**

1. ಅಧ್ಯಕ್ಷರು
ಶ್ರೀ ವೀರಭದ್ರೇಶ್ವರ ದೇವಸ್ಥಾನ ಕಮಿಟಿ.
ಚಿಕ್ಕಹಾಲಿವಾಣ, ಹೊನ್ನಾಳಿ ತಾಲ್ಲೂಕು ದಾವಣಗೆರೆ ಜಿಲ್ಲೆ
2. ಕಾರ್ಯದರ್ಶಿ
ಶ್ರೀ ವೀರಭದ್ರೇಶ್ವರ ದೇವಸ್ಥಾನ ಕಮಿಟಿ.
ಚಿಕ್ಕಹಾಲಿವಾಣ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ
3. ಶ್ರೀ ಟಿ. ಶಿವಶಂಕರಪ್ಪ ಬಿನ್ ತಿಮ್ಮಪ್ಪ
ವಾಸ್ತುಶಿಲ್ಪಿ ಮನೆ ನಂ. 777/31 ಬಿ. ಬ್ಲಾಕ್, ಸರಸ್ವತಿನಗರ,
ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ಹನುಮಕ್ಕ ಇವರುಗಳಾದ ತಾವು ಮೃತ ಸಂಜೀವ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಂಜೀವ ರವರು ಮೂರನೇ ಪ್ರತಿವಾದಿಗಳಾದ ಶ್ರೀ ಟಿ. ಶಿವಶಂಕರಪ್ಪ ಇವರ ದೇವಸ್ಥಾನ ಕಟ್ಟಡ ನಿರ್ಮಾಣ ಕೆಲಸದಲ್ಲಿ ಕಾರ್ಮಿಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಪಿ.ಆರ್. 1353 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-240/05 ದಿನಾಂಕ: 6ನೇ ಸೆಪ್ಟೆಂಬರ್ 2005**

**ಅರ್ಜಿದಾರರು** ವಿರುದ್ಧ

1. ಕೆ. ರಾಮಪ್ಪ ಬಿನ್ ಗಬ್ಬಿಮನಿ ಕೊಟ್ರಪ್ಪ
2. ಕೆಂಚಮ್ಮ ಕೋಂ ಕೆ. ರಾಮಪ್ಪ
ವಾಸ: ಕುರುಬರಗೇರಿ ಹರಪನಹಳ್ಳಿ

**ಪ್ರತಿವಾದಿಗಳು**

1. ಶಿರಹಟ್ಟಿ ಬಸವರಾಜ್ ಬಿನ್ ಬುಳ್ಳಪ್ಪ ಟ್ರಾಕ್ಟರ್ ಮಾಲೀಕರು.
ನಂ.ಕೆ.ಎ-35/T, 191-192, 8ನೇ ವಾರ್ಡ್ ಹರಪನಹಳ್ಳಿ.
2. ದಿ ಬ್ರ್ಯಾಂಚ್ ಮ್ಯಾನೇಜರ್,
ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ಕೆ. ರಾಮಪ್ಪ (ತಂದೆ) ಕೆಂಚಮ್ಮ (ತಾಯಿ) ಇವರುಗಳಾದ ತಾವು ಮೃತ ರಾಜು @ ರಾಜಪ್ಪ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಾಜು @ ರಾಜಪ್ಪ ರವರು ಒಂದನೇ ಪ್ರತಿವಾದಿಗಳಾದ ಶಿರಹಟ್ಟಿ ಬಸವರಾಜ್ ಇವರ ಟ್ರಾಕ್ಟರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಪಿ.ಆರ್. 1354 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ.ಕಾಅದಾ:ಕಾನಪ:ಸಿಆರ್-241/05 ದಿನಾಂಕ: 6ನೇ ಸೆಪ್ಟೆಂಬರ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ರಾಮಕ್ಕ ಕೋಂ ಲೇ।। ನಾಗಪ್ಪ
ವಾಸ: ಕುರುಬರಗೇರಿ ಹರಪನಹಳ್ಳಿ ತಾ।।
ದಾವಣಗೆರೆ ಜಿಲ್ಲೆ.

1. ಶಿರಹಟ್ಟಿ ಬಸವರಾಜ್ ಬಿನ್ ಬುಳ್ಳಪ್ಪ ಟ್ರ್ಯಾಕ್ಟರ್ ಮಾಲೀಕರು. ನಂ.ಕೆ.ಎ-35/T, 191-192, 8ನೇ ವಾರ್ಡ್ ಹರಪನಹಳ್ಳಿ.
2. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ರಾಮಕ್ಕ ಇವರುಗಳಾದ ತಾವು ಮೃತ ಕು।। ಅಂಜಿನಮ್ಮ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕು।। ಅಂಜಿನಮ್ಮ ರವರು ಒಂದನೇ ಪ್ರತಿವಾದಿಗಳಾದ ಶಿರಹಟ್ಟಿ ಬಸವರಾಜ್ ಇವರ ಟ್ರ್ಯಾಕ್ಟರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1355

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ.ಕಾಅದಾ:ಕಾನಪ:ಸಿಆರ್-233/05 ದಿನಾಂಕ: 12ನೇ ಆಗಸ್ಟ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಸಾವಿತ್ರಮ್ಮ ಕೋಂ
ಲೇ।। ಎ.ಕೆ. ಹನುಮಂತಪ್ಪ ಹಾಗೂ ಇತರರು.
ವಾಸ: ಗೋಪಗೊಂಡನಹಳ್ಳಿ ಹೊನ್ನಾಳಿ ತಾಲ್ಲೂಕು

1. ಡಿ.ಬಿ. ಲಿಂಗರಾಜ್, ಲಾರಿ ಮಾಲೀಕರು, ನಂ. ಕೆ.ಎ. 14/4466 ಎನ್.ಎಂ.ಸಿ. ಮೇನ್ ರೋಡ್, ಭದ್ರಾವತಿ ಟೌನ್.
2. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ಪಿ.ಬಿ. ನಂ. 123 ಶಿವಮಂಗಳ ಬಿಲ್ಡಿಂಗ್ ಚನ್ನಗಿರಿ ರೋಡ್, ಭದ್ರಾವತಿ ಟೌನ್-577 301.

**ಪ್ರಕಟಣೆ**

ಶ್ರೀ:ಶ್ರೀಮತಿ ಸಾವಿತ್ರಮ್ಮ (ಹೆಂಡತಿ) (2) ಕುಮಾರಿ ಭಾಗ್ಯಲಕ್ಷ್ಮಿ (ಮಗಳು) (3) ಕು।। ರಂಜಿತ (ಮಗಳು) (4) ಕು।। ಸುಮಲತ (5) ಮಾ।। ಸಚಿನ್‌ಕುಮಾರ್ ಇವರುಗಳಾದ ತಾವು ಮೃತ ಎ.ಕೆ. ಹನುಮಂತಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎ.ಕೆ. ಹನುಮಂತಪ್ಪ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಡಿ.ಬಿ. ಲಿಂಗರಾಜ್ ಇವರ ಲಾರಿ ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1356

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ.ಕಾಅದಾ:ಕಾನಪ:ಸಿಆರ್-239/05 ದಿನಾಂಕ: 26ನೇ ಆಗಸ್ಟ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶಕುಂತಲಮ್ಮ ಕೋಂ ಹನುಮಂತಪ್ಪ
2. ಹನುಮಂತಪ್ಪ ಯರಬಾಲು ಬಿನ್ ಮಲ್ಲಪ್ಪ ವಾಸ: ನಂದಿ ತಾವರೆಗ್ರಾಮ ದಾವಣಗೆರೆ ತಾಲ್ಲೂಕು.

1. ಡಿ ರಾಜಶೇಖರ್ ಬಿನ್ ಡಿ. ಬಸವನಗೌಡ, ಟಿಪ್ಪರ್ ಲಾರಿ ಮಾಲೀಕರು. ನಂ. ಕೆ.ಎ. 35/5456 ವಾಸ: ಲಿಂಗದಹಳ್ಳಿ ಗ್ರಾಮ. ನಾಗಲಾಪುರ ಪೋಸ್ಟ್, ಸಂಡೂರು ತಾಲ್ಲೂಕು. ಬಳ್ಳಾರಿ ಜಿಲ್ಲೆ.
2. ದಿ ಡಿವಿಜನಲ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಕೇಶವಪುರ ಹುಬ್ಬಳ್ಳಿ.

**ಪ್ರಕಟಣೆ**

ಶ್ರೀ:ಶ್ರೀಮತಿ ಶಕುಂತಲಮ್ಮ (ತಾಯಿ) ಹನುಮಂತಪ್ಪ ಯರಬಾಲು ಇವರುಗಳಾದ ತಾವು ಮೃತ ಮಂಜಪ್ಪ @ ಮಂಜುನಾಥ ಇವರ ತಾಯಿ ಮತ್ತು ತಂದೆ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಂಜಪ್ಪ @ ಮಂಜುನಾಥ ರವರು ಒಂದನೇ ಪ್ರತಿವಾದಿಗಳಾದ ಡಿ. ರಾಜಶೇಖರ ಇವರ ಟಿಪ್ಪರ್ ಲಾರಿ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1357 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ.ಕಾಅದಾ:ಕಾನಪ:ಸಿಆರ್-217/05 ದಿನಾಂಕ: 28ನೇ ಜುಲೈ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಶ್ರೀಮತಿ ಮಂಜಮ್ಮ ಕೋಂ ಲೇ॥ ರಂಗಪ್ಪ
ಮತ್ತಿತರರು
ವಾಸ: ಬೀಳಚೋಡು ಗ್ರಾಮ ಜಗಳೂರು ತಾಲ್ಲೂಕು
ದಾವಣಗೆರೆ ಜಿಲ್ಲೆ.

1. ಶ್ರೀ ಎಸ್. ನವಾಜ್ ಬಿನ್ ಸೈಯದ್ ಗಫೂರ್‌ಸಾಬ್ ಮಿನಿಲಾರಿ ಮಾಲೀಕರು. ನಂ.ಜಿ.ಎಂ.2 ಟಿ.9504 ಮನೆ ನಂ.54 ಲೇಬರ್ ಕಾಲೋನಿ 3ನೇ ಕ್ರಾಸ್ ದಾವಣಗೆರೆ.
2. ದಿ ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ., ಚಾಮರಾಜಪೇಟೆ, ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ಮಂಜಮ್ಮ (ಹೆಂಡತಿ) (2) ಕರಿಬಸಜ್ಜಯ್ಯ (ಮಗ) (3) ರಂಗಪ್ಪ (ಮಗ) (4) ರಮೇಶ (ಮಗ) (5) ಸುಜಾತ (ಮಗಳು) ಇವರುಗಳಾದ ತಾವು ಮೃತ ರಂಗಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಂಗಪ್ಪ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಎಸ್. ನವಾಜ್ ಇವರ ಮಿನಿಲಾರಿ ರಲ್ಲಿ ಲೋಡರ್ & ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1358 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲಾ, ಶಿವಮೊಗ್ಗ

**ಪ್ರಕರಣ ಸಂಖ್ಯೆ:ಕಾಪಕ:ಸಿಆರ್-51:05, ದಿನಾಂಕ: 3ನೇ ಸೆಪ್ಟೆಂಬರ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ದೇವಮ್ಮ ಕೋಂ ಲೇಟ್ ರಾಮಣ್ಣ
2. ಪೂರ್ಣಿಮ ಬಿನ್ ಲೇಟ್ ರಾಮಣ್ಣ
3. ಪವಿತ್ರ ಬಿನ್ ಲೇಟ್ ರಾಮಣ್ಣ
4. ಮಂಜುನಾಥ ಬಿನ್ ಲೇಟ್ ರಾಮಣ್ಣ
   ವಾಸ: ಮಾವುಲಿ ಗ್ರಾಮ, ಸೊರಬ ತಾ:

1. ಸೆಲ್ವಕುಮಾರ್ ಬಿನ್ ಪೆರುಮಾಳ್ ನಾಯ್ಡು
   ವಾಸ: 5ನೇ ತಿರುವು, ಸಿದ್ದೇಶ್ವರ ನಗರ ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ರಾಮಣ್ಣ ರವರು ಪ್ರತಿವಾದಿಯವರಲ್ಲಿ ಕೂಲಿ ಆಗಿ ಕೆಲಸದ ಮೇಲೆ ಇದ್ದಾಗ 7.9.03 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 25.8.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 1359 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.